ಶ್ರೀ

# ಗುರುದೇವರ ವಚನ

ಹರಾಮಾರ್ಕೆಗಾನ



ಪ್ರಕಾಶಕರು:

ಶ್ರೀ ರಾಮಕೃಷ್ಣಾಶ್ರಮ

ಮೈಸೂರು-೨

# ಶ್ರೀ ಗುರುದೇವರ ವಚನ

(ಶ್ರೀರಾಮಕೃಷ್ಣಪರಮಹಂಸರ ಉಪದೇಶಸಂಗ್ರಹ)

ಸ್ವಾಮಿ ಬ್ರಹ್ಮಾನಂದರ ಸಂಕಲನ



ಪ್ರಕಾಶಕರು

ಶ್ರೀರಾಮಕೃಷ್ಣಾಶ್ರಮ

ಮೈಸೂರು–೨

0·75 ನ. ಪೈಸೆ.

ಮೂರನೆಯ ಮುದ್ರಣ ೧೯೫೮







ಪ್ರಕಾಶಕರು:
ಅಧ್ಯಕ್ಷರು
ಶ್ರೀರಾಮಕೃಷ್ಣ ಆಶ್ರಮ, ಮೈಸೂರು.

ಮುದ್ರಕರು:
ಶಾರದಾ ಛಾಪಖಾನೆ, ಮಂಗಳೂರು-1

## ವಿವರ

# ಶ್ರೀ ಗುರುದೇವರ ವಚನ

## ೧. ಆತ್ಮಜ್ಞಾನ

೧. ಮೊದಲು ನಿನ್ನನ್ನು ನೀನು ತಿಳಿ. ಅನಂತರ ದೇವರನ್ನು
ೀನು ತಿಳಿಯುವೆ. ನನ್ನ ಅಹಂಕಾರ ಎಂದರೇನು? ಇದೇನು ನನ್ನ
ಗಳೆ, ಕಾಲುಗಳೆ, ಮಾಂಸವೆ, ರಕ್ತವೆ, ಅಥವಾ ನನ್ನ ದೇಹದ
ತ್ತಾವುದಾದರೂ ಅಂಗವೆ? ಸರಿಯಾಗಿ ಆಲೋಚನೆ ಮಾಡಿ
ೋಡು. ಆಗ 'ನಾನು' ಎಂಬ ಅಹಂಕಾರವಿಲ್ಲವೆಂದು ಗೊತ್ತಾಗು
ದು. ಈರುಳ್ಳಿಯ ಸಿಪ್ಪೆಯನ್ನು ಹೆಚ್ಚು ಬಿಡಿಸಿದಂತೆಲ್ಲ ಮತ್ತೂ
ಚ್ಚು ಸಿಪ್ಪೆ ಕಾಣುವುದು. ಅದರಲ್ಲಿ ತಿರುಳು ಎಂಬುದೇನೂ
ಾಣುವುದಿಲ್ಲ. ಅದರಂತೆಯೆ ನೀವು ಅಹಂಕಾರವನ್ನು ವಿಭಜನೆ
ಾಡುತ್ತಾ ಹೋದರೆ ಅದು ಶೂನ್ಯದಲ್ಲಿ ಲಯವಾಗುವುದು. ಕೊನೆಗೆ
ನು ಉಳಿಯುವುದೋ ಅದೇ ಶುದ್ಧ ಆತ್ಮ. ಅಹಂಕಾರ ಲಯ
ಾದಾಗ ದೇವರು ಕಾಣುವನು.

೨. ಎರಡು ತೆರದ ಅಹಂಕಾರಗಳಿವೆ—ಒಂದು ಮಾಗಿರು
ದು, ಮತ್ತೊಂದು ಕಾಯಾಗಿರುವುದು. ಯಾವ ಅಹಂಕಾರಕ್ಕೆ,
ದು ನನ್ನ ಮನೆ, ನನ್ನ ಕೋಣೆ, ನನ್ನ ಮಗ ಎಂಬ ಭಾವನೆ ಇರು
ದೋ ಅದು ಇನ್ನೂ ಕಾಯಾದ ಅಹಂಕಾರ. ಯಾವ ಅಹಂಕಾರಕ್ಕೆ
ನಾನು ದೇವರ ಸೇವಕ, ನಾನು ಅವನ ಮಗು; ನಿತ್ಯ ಮುಕ್ತನು
ಾನು, ಸರ್ವಜ್ಞನು ನಾನು' ಎಂಬ ಭಾವನೆ ಇರುವುದೋ ಅದು
ಾಗಿದ ಅಹಂಕಾರ.

೩. ಯಾರೋ ಒಬ್ಬರು ಶ್ರೀರಾಮಕೃಷ್ಣರನ್ನು ತನಗೆ ಒಂದು
ಾತಿನಲ್ಲಿ ಜ್ಞಾನವನ್ನು ಉಪದೇಶಿಸಿ ಎಂದು ಕೇಳಿಕೊಂಡರು. ಅದಕ್ಕೆ
ವರು, "ಬ್ರಹ್ಮ ಒಂದೇ ಸತ್ಯ; ಜಗತ್ತು ಮಿಥ್ಯ, ಇದನ್ನು ಸಾಕ್ಷಾತ್ಕಾರ
ಾಡಿಕೊಂಡು ಮೌನವಾಗಿರು" ಎಂದರು.

೪. ಒಬ್ಬ ಮನುಷ್ಯನಿಗೆ ದೇಹವಿರುವ ತನಕ ಅಹಂಕಾರ
ಂಪೂರ್ಣವಾಗಿ ಅವನನ್ನು ಬಿಡುವುದಿಲ್ಲ. ಯಾವಾಗಲೂ ಅದರ
ರಳು ಸ್ವಲ್ಪ ಇದ್ದೇ ಇರುವುದು. ತೆಂಗಿನ ಗಿಡದ ಗರಿಗಳು ಬೀಳು

ತ್ತವೆ, ಆದರೆ ಅವು ಹಿಂದೆ ತಮ್ಮ ಗುರುತನ್ನು ಯಾವಾಗಲೂ ಬ
ತ್ತವೆ. ಅದರಂತೆಯೆ ಒಬ್ಬನ ಅಹಂಕಾರವೂ ಕೂಡ. ಈ
ಅಹಂಕಾರ, ಆಗಲೇ ಯಾರು ಸಿದ್ಧರಾಗಿರುವರೋ ಅವರನ್ನು ಬ
ಸುವುದಿಲ್ಲ.

೫. ಶ್ರೀರಾಮಕೃಷ್ಣರು ತೋತಾಪುರಿಯನ್ನು, "ನಿನ್
ಮುಂದುವರಿದಿರುವವನಿಗೆ ಧ್ಯಾನದ ಆವಶ್ಯಕತೆ ಏನಿದೆ?" ಎ
ಕೇಳಿದರು. ಅದಕ್ಕೆ ತೋತಾಪುರಿ "ಹಿತ್ತಾಳೆಯ ಪಾತ್ರೆಯನ್ನು
ದಿನವೂ ತಿಕ್ಕದೇ ಇದ್ದರೆ ಅದು ಮಂಕಾಗುವುದು; ಅದರಂ
ಪ್ರತಿದಿನವೂ ಧ್ಯಾನವಿಲ್ಲದೆ ಇದ್ದರೆ ಮನುಷ್ಯ ಶುದ್ಧವಾಗಿರುವು
ಎಂದು ಉತ್ತರ ಕೊಟ್ಟನು. ಶ್ರೀರಾಮಕೃಷ್ಣರು "ಪಾತ್ರೆ ಚಿನ್ನ
ಮಾಡಿದ್ದರೆ ಅದು ಮಂಕಾಗುವುದಿಲ್ಲ" ಎಂದು ಉತ್ತರ ಕೊಟ್
ಯಾರು ದೇವರನ್ನು ನೋಡಿರುವರೋ ಅವರಿಗೆ ಧ್ಯಾನಜಪತಪಾ
ಆವಶ್ಯಕತೆ ಇಲ್ಲ.

೬. ಅನುಲೋಮ ಮತ್ತು ವಿಲೋಮ ಎಂಬ ಎರಡು ಬ
ಯುಕ್ತಿ ಇದೆ. ತಿರುಳನ್ನು ಒಳಗೊಂಡಿರುವ ಚಿಪ್ಪಿನಂತೆ ಒ
ತಿರುಳಿನ ಮೇಲೆ ಇರುವ ಚಿಪ್ಪಿನಂತೆ ಮತ್ತೊಂದು.

೭. ಅಹಂಕಾರದ ಭಾವನೆಯಲ್ಲಿ ಅನಹಂಕಾರವೂ
ಯಾರಿಗೆ ಬೆಳಕಿನ ಭಾವನೆ ಇದೆಯೋ ಅವರಿಗೆ ಕತ್ತಲೆಯ ಭಾವನೆ
ಇದೆ. ಯಾರಿಗೆ ಪಾಪದ ಭಾವನೆ ಇದೆಯೋ ಅವರಿಗೆ ಪು
ಭಾವನೆಯೂ ಇದೆ.

೮. ಕಾಲಿಗೆ ಎಕ್ಕಡವನ್ನು ಹಾಕಿಕೊಂಡಮೇಲೆ ನೀವು ಸ
ವಾಗಿ ಮುಳ್ಳಿನ ಮೇಲೆ ನಡೆಯಬಹುದು. ಆಧ್ಯಾತ್ಮಿಕ ಜ್ಞಾನ
ಕೂಡಿದ ಮೇಲೆ ಮುಳ್ಳಿನಂತೆ ಇರುವ ಪ್ರಪಂಚದ ಮೇಲೆ ನಿರಾ
ವಾಗಿ ನಡೆಯಬಹುದು.

೯. ಯಾವಾಗಲೂ ತನ್ಮಯಾವಸ್ಥೆಯಲ್ಲಿ ಒಬ್ಬ ಸಾ
ದ್ದನು. ಯಾರೊಂದಿಗೂ ಅವನು ಮಾತನಾಡುತ್ತಿರಲಿಲ್ಲ. ಅವ
ಹುಚ್ಚನೆಂದು ತಿಳಿದುಕೊಂಡಿದ್ದರು. ಒಂದು ದಿನ ಹಳ್ಳಿ
ಭಿಕ್ಷವನ್ನು ತಂದಮೇಲೆ ಒಂದು ನಾಯಿಯ ಪಕ್ಕದಲ್ಲಿ ಕ
ಕೊಂಡು ಊಟಮಾಡಲು ಮೊದಲು ಮಾಡಿದನು. ಸಾಧು
ತುತ್ತನ್ನು ತನ್ನ ಬಾಯಿಗೆ ಇಟ್ಟುಕೊಳ್ಳುವನು. ಅನಂತರ ಮತ್ತೆ

ುತ್ತನ್ನು ನಾಯಿಯ ಬಾಯಿಗೆ ಇಡುವನು. ಹೀಗೆ ಸಾಧು ಮತ್ತು ನಾಯಿ ದೊಡ್ಡ ಸ್ನೇಹಿತರ ಜೋಡಿಯಂತೆ ಊಟಮಾಡುತ್ತಿದ್ದರು. ಇದು ಒಂದು ವಿಚಿತ್ರ ದೃಶ್ಯವಾಗಿ ಜನರ ಗುಂಪೊಂದು ಅಲ್ಲಿ ನೆರೆಯಿತು. ಪ್ರೇಕ್ಷಕರಲ್ಲಿ ಕೆಲವರು ಸಾಧುವನ್ನು ಹುಚ್ಚನೆಂದು ತಿಳಿದು ನಗಲು ಮೊದಲು ಮಾಡಿದರು. ಅದಕ್ಕೆ ಸಾಧು ನೀವು ನಗುವುದೇಕೆಂದು ಹೀಗೆಂದನು:—

"ವಿಷ್ಣು ವಿಷ್ಣುವಿನೊಂದಿಗೆ ಕುಳಿತಿರುವನು,
ವಿಷ್ಣು ವಿಷ್ಣುವನ್ನು ಊಟಮಾಡಿಸುತ್ತಿರುವನು;
ಹೆ! ವಿಷ್ಣುವೆ, ನೀನು ನಗುವುದೇತಕ್ಕೆ?
ಏನಿದೆಯೊ ಅದೆಲ್ಲವೂ ವಿಷ್ಣುಮಯವೆ."

೧೦. ತನ್ನಿಂದ ಹೊರಗೆ ದೇವರನ್ನು ಹುಡುಕುವಂತೆ ಮಾಡಿಸುವುದು ಅಜ್ಞಾನ. ದೇವರು ತನ್ನಲ್ಲಿರುವನು ಎಂದು ಯಾವಾಗ ಗೊತ್ತಾಗುವುದೋ, ಅದೇ ಜ್ಞಾನ. ಯಾರಿಗೆ ಅದು ತನ್ನಲ್ಲಿದೆಯೋ (ಅಂದರೆ ದೇವರನ್ನು ತನ್ನಲ್ಲಿ ತಿಳಿಯುತ್ತಾರೆಯೋ), ಅದು ಅಲ್ಲಿಯೂ ಇದೆ. (ಅಂದರೆ ತನ್ನ ಮನಸ್ಸು ಆತನ ಪಾದ ಕಮಲದಲ್ಲಿಯೂ ಇದೆ.)

## ೨. ಈಶ್ವರ

೧. ದೇವರು ಮನುಷ್ಯನಲ್ಲಿ ಹೇಗೆ ಇರುವನು ಗೊತ್ತಿದೆಯೆ? ಶ್ರೀಮಂತರ ಮನೆಯ ಹೆಂಗಸರು ಪರದೆಯ ಹಿಂದೆ ಇರುವಂತೆ ಇರುವನು. ಅವರು ಎಲ್ಲರನ್ನೂ ನೋಡಬಲ್ಲರು, ಆದರೆ ಯಾರೂ ಅವರನ್ನು ನೋಡಲಾರರು.

೨. ಬೆಳಕನ್ನು ಕೊಡುವುದು ದೀಪದ ಸ್ವಭಾವ. ಅದರ ಸಹಾಯದಿಂದ, ಕೆಲವರು ಅಡಿಗೆ ಮಾಡಬಹುದು, ಕೆಲವರು ಕಳ್ಳ ಪತ್ರಗಳನ್ನು ಬರೆಯಬಹುದು, ಮತ್ತೆ ಕೆಲವರು ಭಾಗವತವನ್ನು ಓದಬಹುದು. ಅದು ಬೆಳಕಿನ ತಪ್ಪೆ? ಆದಕಾರಣ ಕೆಲವರು ಅವನ ಪವಿತ್ರನಾಮದಿಂದ ಮುಕ್ತಿಯನ್ನು ಸಂಪಾದಿಸಿದರೆ, ಮತ್ತೆ ಕೆಲವರು ಕಳ್ಳತನ ನಿರ್ವಿಘ್ನವಾಗಿ ನಡೆಯಲಿ ಎಂದು ಬೇಡಿಕೊಂಡರೆ, ಅದು ಅವನ ತಪ್ಪೆ?

೩. ನೀವು ಏನನ್ನು ಹುಡುಕುವಿರೊ ಅದು ನಿಮಗೆ ದೊ
ತ್ತದೆ. ದೇವರು ಕಲ್ಪತರುವಿನಂತೆ. ಪ್ರತಿಯೊಬ್ಬರೂ ಏನನ್ನು ಅಪೆ
ಸುತ್ತಾರೆಯೋ ಅದನ್ನು ಅವನಿಂದ ಪಡೆಯುತ್ತಾರೆ. ಒಬ್ಬ ಬಡವನ
ವಿದ್ಯಾವಂತನಾಗಿ ನ್ಯಾಯಾಸ್ಥಾನದಲ್ಲಿ ನ್ಯಾಯಾಧಿಪತಿಯಾದರೆ, ತ
ಪರವಾಗಿಲ್ಲ ಚೆನ್ನಾಗಿರುವೆ, ಎಂದು ತಿಳಿದುಕೊಳ್ಳುತ್ತಾನೆ. ದೇವ
ಕೂಡ ಅವನ ಮಾತನ್ನೆ ಮರುಧ್ವನಿಕೊಡುತ್ತಾ, "ನೀನು ಹಾಗೆ ಇ
ಎನ್ನುತ್ತಾನೆ. ಅನಂತರ ಅದೇ ನ್ಯಾಯಾಧಿಪತಿ ನಿವೃತ್ತನಾಗಿ ವಿರ
ವೇತನವನ್ನು (Pension) ತೆಗೆದುಕೊಂಡ ಮೇಲೆ, ವಿಷಯಗಳ
ಅವುಗಳ ನಿಜಸ್ಥಿತಿಯಲ್ಲಿ ನೋಡುತ್ತಾನೆ. ಆಗ "ಈ ಪ್ರಪಂಚ
ನಾನು ಏನು ಸಾರ್ಥಕ ಕೆಲಸಮಾಡಿದೆ?" ಎಂದು ಪ್ರಶ್ನೆಯನ್ನು ಕ
ಕೊಳ್ಳುವನು. ದೇವರೂ ಕೂಡ ಅದೇ ಮಾತನ್ನು ಪ್ರತಿಧ್ವನಿಗೊ
"ಹೌದು, ನಿಜ; ನೀನು ಏನು ಮಾಡಿದೆ?" ಎನ್ನುತ್ತಾನೆ.

೪. ಸಾಕಾರ ದೇವರಿಗೂ ನಿರಾಕಾರ ದೇವರಿಗೂ ಏ
ಭೇದವಿಲ್ಲ. ಪರಮೇಶ್ವರನನ್ನು ಅಚಲನೆಂದು ಭಾವಿಸಿದಾಗ, ನಿಗು
ಬ್ರಹ್ಮನಾಗುತ್ತಾನೆ. ಅವನು ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳಲ್ಲಿ ನಿ
ನೆಂದು ಭಾವಿಸಿದಾಗ, ಸಾಕಾರ ಅಥವಾ ಶಕ್ತಿಯಾಗುತ್ತಾನೆ.

೫. ಒಂದು ದಿನ ದೇವರ ವಿಚಾರವಾಗಿ ಮಾತನಾಡ
ದ್ದಾಗ, ಮಥುರನಾಥನು "ದೇವರೂ ಕೂಡ ಪ್ರಕೃತಿನಿಯಮಗಳ
ಬದ್ಧನಾಗಿರುವನು; ತನ್ನ ಇಚ್ಛೆ ಬಂದಂತೆ ನಡೆಯುವುದಕ್ಕೆ ಆಗ
ದಿಲ್ಲ" ಎಂದನು. ಅದಕ್ಕೆ ಶ್ರೀರಾಮಕೃಷ್ಣರು, "ಅದು ಹೇಗೆ?
ಇಚ್ಛೆ ಬಂದಂತೆ ಅವನು ನಡೆಯುತ್ತಾನೆ. ತನ್ನ ಮನಸ್ಸಿಗೆ ಬಂದುದ
ಅವನು ಮಾಡಬಲ್ಲ" ಎಂದರು. ಮಥುರನಾಥನು, "ಬರೀ
ಇಚ್ಛಾಮಾತ್ರದಿಂದ ಈ ಕೆಂಪು ದಾಸವಾಳದ ಗಿಡದಲ್ಲಿ ಬಿಳೀ ದ
ವಾಳದ ಹೂವು ಬಿಡುವಂತೆ ಮಾಡಬಲ್ಲನೆ?" ಎಂದನು. ಶ್ರೀರಾ
ಕೃಷ್ಣರು "ನಿಜವಾಗಿಯೂ ಅವನು ಅದನ್ನು ಮಾಡಬಲ್ಲನು. ಅ
ಇಚ್ಛೆಯಾದರೆ ಈ ಕೆಂಪು ದಾಸವಾಳದ ಗಿಡ ಬಿಳಿಯ ಹೂವ
ಕೊಡಬಲ್ಲದು" ಎಂದರು. ಆದರೆ ಮಥುರನಾಥನಿಗೆ ಪೂ
ಸಮಾಧಾನವಾಗಲಿಲ್ಲ. ಸ್ವಲ್ಪ ದಿನದಲ್ಲಿ ದಕ್ಷಿಣೇಶ್ವರದ ತೋಟದ
ಒಂದು ದಾಸವಾಳದ ಗಿಡದಲ್ಲಿ ಎರಡು ಹೂವುಗಳು ಬಿಟ್ಟ
ಅದರಲ್ಲಿ ಒಂದು ಕೆಂಪು ಮತ್ತೊಂದು ಬಿಳುಪು. ಶ್ರೀರಾಮಕೃಷ

ಎರಡು ಹೂವುಗಳೂ ಇದ್ದ ಕೊಂಬೆಯನ್ನು ಮಥುರನಾಥನ
ರ ತೆಗೆದುಕೊಂಡು ಹೋದರು. ಆತನಿಗೆ ಅತ್ಯಾಶ್ಚರ್ಯವಾಗಿ
ಪ್ಪ! ನಿನ್ನೊಂದಿಗೆ ನಾನು ಮತ್ತೊಮ್ಮೆ ವಾದಿಸುವುದಿಲ್ಲ" ಎಂದನು.

೬. ಸಾಕಾರ ಮತ್ತು ನಿರಾಕಾರದೇವರ ವಿಚಾರವಾಗಿ ನಿನಗೆ
ಏದರೂ ಗೊತ್ತೆ? ಅದು ನೀರು ಮತ್ತು ಹಿಮದ ಗಡ್ಡೆಯಂತೆ.
ು ಘನೀಭೂತವಾಗಿ ಹಿಮದ ಗಡ್ಡೆಯಾದಾಗ ಅದಕ್ಕೆ ಒಂದು
ಾರ ಬರುವುದು. ಅದೇ ಹಿಮದ ಗಡ್ಡೆ ಕರಗಿ ನೀರಾದರೆ ಆ
ಾರವೆಲ್ಲ ಕರಗಿ ಮಾಯವಾಗುವುದು.

೭. ಮರಣಕಾಲವನ್ನು ಎದುರು ನೋಡುತ್ತಾ ಶರಪಂಜರದ
ುಲೆ ಮಲಗಿರುವ ಭೀಷ್ಮನ ಕಣ್ಣಿನಿಂದ ಕಂಬನಿ ಸುರಿಯುತ್ತಿತ್ತು.
ನ್ನು ನೋಡಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು, "ಸಹೋದರನೆ,
ು ಆಶ್ಚರ್ಯವಿದು! ನನ್ನ ತಾತ ನಿತ್ಯಸತ್ಯಸಂಧನೂ, ಅಷ್ಟವಸುಗಳಲ್ಲಿ
ನೂ ಆಗಿದ್ದರೂ, ಮಾಯಾವಶನಾಗಿ ಅವನೂ ಕಣ್ಣಲ್ಲಿ ನೀರು
ುಸುತ್ತಿರುವನು" ಎಂದನು. ಭಗವಂತ ಭೀಷ್ಮರಿಗೆ ಇದನ್ನು
ಿದ ಮೇಲೆ ಭೀಷ್ಮರು ಹೀಗೆಂದರು: "ಹೇ! ಕೃಷ್ಣ! ಮಾಯಾವಶ
ಿ ನಾನು ಅಳುತ್ತಿಲ್ಲವೆಂಬುದು ನಿನಗೆ ಚೆನ್ನಾಗಿ ಗೊತ್ತಿದೆ. ಸ್ವಲ್ಪ
ದರೂ ನಿನ್ನ ಲೀಲೆಯ ರಹಸ್ಯ ತಿಳಿಯಲಿಲ್ಲವಲ್ಲವೆಂಬುದೇ ನನ್ನ
ೀರಿಗೆ ಕಾರಣ. ಯಾವ ಭಗವಂತನ ನಾಮೋಚ್ಚಾರಣೆ ಮಾಡಿ
ನವರು ಸರ್ವ ಕಷ್ಟಗಳಿಂದಲೂ ಪಾರಾಗುತ್ತಾರೆಯೋ ಅಂತಹ
ಕೃಷ್ಣನೆ ಪಾಂಡವರಿಗೆ ಸಾರಥಿಯಾಗಿರುವನು, ಸ್ನೇಹಿತನಾಗಿರು
ು. ಆದರೂ ಅವರ ಕಷ್ಟಕ್ಕೆ ಮಿತಿಯಿಲ್ಲ!"

೮. ಕಾಶಿಗೆ ಮಥುರನಾಥನೊಂದಿಗೆ ಶ್ರೀರಾಮಕೃಷ್ಣರು
ರ್ಥಯಾತ್ರೆಗೆ ಹೊರಟರು. ಕಾಶಿಯಲ್ಲಿದ್ದಾಗ ಅವರು ತ್ರೈಲಿಂಗ
ಮಿಗಳನ್ನು ಕಂಡರು. ಆಗ 'ದೇವರು ಒಬ್ಬನೇ, ಆದರೂ
ರೇಕೆ ಹಲವು ದೇವರ ಮಾತನ್ನು ಆಡುತ್ತಾರೆ' ಎಂದು ಕೇಳಿದರು.
ಮಿಗಳು ಆಗ ಮೌನವನ್ನು ಆಚರಿಸುತ್ತಿದ್ದರು. ಆದಕಾರಣವೇ
ರು ತಮ್ಮ ಒಂದು ಬೆರಳನ್ನು ಮೇಲೆತ್ತಿ ಧ್ಯಾನಮಗ್ನರಾದರು.
ನದಿಂದ ದೇವರು ಒಬ್ಬನೇ ಎಂದು ಗೊತ್ತಾಗುವುದೆಂದೂ, ವಾದಕ್ಕೆ
ಿತಾಗ ಐಕ್ಯತೆ ಮಾಯವಾಗಿ ಹಲವು ದೇವರ ಭಾವ ಬರುವುದೆಂದೂ
ಿಂದ ತೋರುವಂತೆ ಸಲಹೆ ಕೊಟ್ಟರು.

೯. ಸಾಕಾರ ನಿರಾಕಾರ ದೇವರುಗಳೆರಡೂ ಬೇರೆ ವ್ಯಕ್ತಿಗಳಲ್ಲ. ಯಾರು ಸಾಕಾರನೋ ಅವನು ನಿರಾಕಾರಿ ಆಗಿರುವನು. ಮೇರೆ ಇಲ್ಲದೆ ಸುತ್ತಲೂ ನೀರಿನಿಂದ ಕೂಡಿದ, ನೋಡಿದರೂ ದಡವು ಕಾಣದಿರುವ ಸಾಗರವನ್ನು ಆಲೋಚಿಸಿ ನೆ ಅಲ್ಲೊಂದು ಇಲ್ಲೊಂದು ಕಡೆ ಶೈತ್ಯಾಧಿಕ್ಯದಿಂದ ಉಂಟಾದ ನೀಗ ಗಳು ಅಲ್ಲಿ ತೇಲುತ್ತಿವೆ. ಅದರಂತೆಯೇ, ಭಗವಂತನನ್ನು ಪೂಜಿಸು ಭಕ್ತಿ ಎಂಬ ಶೈತ್ಯಾಧಿಕ್ಯದ ಪ್ರಭಾವದಿಂದ ನಿರಾಕಾರನು ಸ ನಾದಂತೆ ಅವನ ಮುಂದೆ ತೋರುತ್ತಾನೆ. ಪುನಃ ಸೂರ್ಯೋ ವಾದ ಮೇಲೆ ಸಾಕಾರದೇವರು ನಿರಾಕಾರದಲ್ಲಿ ಕರಗಿ ಹೋಗು

## ೩. ಮಾಯೆ

೧. ಮಾಯೆಯ ಸ್ವಭಾವವೇನು ನಿಮಗೆ ಗೊತ್ತೆ? ಕೆ ನೀರಿನ ಮೇಲೆ ತೇಲುವ ಪಾಚಿಯಂತೆ. ನೀವು ಅದನ್ನು ಆಚೆಗ ಬಹುದು. ಆದರೆ ಅದು ನೀರಿನ ಮೇಲೆ ಪುನಃ ಬಂದು ಆವರಿಸು ಅದರಂತೆಯೇ ನೀವು ಎಲ್ಲಿಯವರೆಗೆ ನಿಮ್ಮಲ್ಲಿ ವಿಚಾರ ಮಾಡುತ್ತಿ ಅಲ್ಲಿಯವರೆಗೆ ಎಲ್ಲಾ ಚೆನ್ನಾಗಿರುವುದು. ಆದರೆ ಇದಾದ ತಕ್ ಪ್ರಾಪಂಚಿಕ ಬಯಕೆಗಳು ನಿಮ್ಮ ಮೇಲೆ ಮಾಯೆಯ ತೆರೆ ಬೀಸುವುವು.

೨. ಹಾವಿಗೆ ಅದರ ಹಲ್ಲಿನಲ್ಲಿ ವಿಷವಿದೆ. ಆದರೆ ಅದ ಅದಕ್ಕೆ ತೊಂದರೆಯಾಗುವುದಿಲ್ಲ. ವಿಷ ಅದರ ಮೇಲೆ ಪರಿ ವನ್ನುಂಟುಮಾಡುವುದಿಲ್ಲ ಅಥವಾ ಅದನ್ನು ಕೊಲ್ಲುವುದಿಲ್ಲ. ಕಡಿಯಬಹುದಾದ ಮತ್ತೊಂದು ಪ್ರಾಣಿಗೆ ಅದು ವಿಷ. ಇದರಂ ವ್ಯಾವಹಾರಿಕ ಜಗತ್ತು ದೇವರಲ್ಲಿ ಇದ್ದರೂ ಕೂಡ ಅವನು ಇ ಮೀರಿರುವನು. ವ್ಯಾವಹಾರಿಕ ಜಗತ್ತು ನಮಗೆ ಮಾತ್ರ ಇರು ಕಾಣುವುದು.

೩. ಮಾಯೆಗೂ (ಸ್ವಾರ್ಥತೆ) ದಯೆಗೂ (ಪರೋಪ ಏನು ವ್ಯತ್ಯಾಸ? ಮಾಯೆ ಅಂದರೆ ತನ್ನ ನಂಟರು ಇಷ್ಟರುಗಳ ತಾಯಿ, ತಂದೆ, ಸಹೋದರರು, ಸಹೋದರಿಯರು, ಹೆ ಮಕ್ಕಳು, ತನ್ನ ಸೋದರಳಿಯ ಮತ್ತು ಸೋದರಸೊಸೆ ಇವರ

ರುವ ಆಸಕ್ತಿ ಮತ್ತು ಪ್ರೀತಿ. ದಯೆ ಎಂದರೆ ಎಲ್ಲರ ಮೇಲೆಯೂ
ಸುನಾಗಿರುವ ಪ್ರೇಮ. ದೇವರು ಎಲ್ಲರಲ್ಲಿಯೂ ಇರುವನು ಎಂಬ
ಾವದಿಂದ ಇದು ಪ್ರಾಪ್ತವಾಗುವುದು.

೪. ಒಬ್ಬನನ್ನು ಪಿಶಾಚಿಯು ಮೆಟ್ಟಿಕೊಂಡಿದ್ದರೆ ಹಾಗೆ
ನ್ನನ್ನು ಅದು ಮೆಟ್ಟಿಕೊಂಡಿದೆ ಎಂದು ಅವನಿಗೆ ಗೊತ್ತಾದರೆ,
ಕ್ಷಣವೇ ಅದು ಬಿಟ್ಟುಹೋಗುವುದು. ಇದರಂತೆಯೇ ಮಾಯೆಗೆ
ಳಪಟ್ಟ ಜೀವರು ತಾವು ಭ್ರಾಂತರಾಗಿರುವೆವು ಎಂದು ತಿಳಿದಾಗ
ಾಯೆಯಿಂದ ಪಾರಾಗುವರು.

೫. ದೇವರನ್ನು ನಮ್ಮ ಕಣ್ಣಿಗೆ ಕಾಣದಂತೆ ಮಾಡಿರುವುದು
ಾಯೆ ಎಂಬ ತೆರೆ. ಈ ಮಾಯಾ ತೆರೆಯನ್ನು ತೆಗೆಯುವ ತನಕ
ಾವು ಪರಮಾತ್ಮನನ್ನು ನೋಡಲಾರೆವು. ಉದಾಹರಣೆಗೆ ಲಕ್ಷ್ಮಣ
ಗಿಂತ ರಾಮ ಕೆಲವು ಹೆಜ್ಜೆ ಮುಂದಿರುವನು. ಸೀತೆ ಅವರ ಮಧ್ಯ
ಲ್ಲಿ ಇರುವಳು ಎಂದು ಇಟ್ಟುಕೊಳ್ಳೋಣ. ಇಲ್ಲಿ ರಾಮ ಪರಮಾತ್ಮ,
ಕ್ಷ್ಮಣ ಜೀವಾತ್ಮ, ಸೀತೆ ಮಾಯೆ. ಸೀತೆ ಎಲ್ಲಿಯವರೆವಿಗೆ ಇಬ್ಬರ
ಮಧ್ಯದಲ್ಲಿ ಇರುವಳೋ ಅಲ್ಲಿಯವರೆವಿಗೂ ಲಕ್ಷ್ಮಣ ರಾಮನನ್ನು
ೋಡಲಾರ. ಅವಳು ಸ್ವಲ್ಪ ಆಚೆಕಡೆ ನಿಂತಾಗ ಮಾತ್ರ ಲಕ್ಷ್ಮಣ
ಾಮನನ್ನು ನೋಡಬಲ್ಲ.

೬. ಮಾಯೆಯಲ್ಲಿ ಎರಡು ವಿಧ: ಒಂದು ದೇವರ ಕಡೆಗೆ
ತೆಗೆದುಕೊಂಡು ಹೋಗುವುದು (ವಿದ್ಯಾಮಾಯೆ), ಮತ್ತೊಂದು
ದೇವರಿಗೆ ವಿರೋಧವಾಗಿ ತೆಗೆದುಕೊಂಡು ಹೋಗುವುದು (ಅವಿದ್ಯಾ
ಮಾಯೆ). ವಿದ್ಯಾಮಾಯೆಯಲ್ಲಿ ಪುನಃ ಎರಡು ವಿಧಗಳಿವೆ. ವಿವೇಕ
ಮತ್ತು ವೈರಾಗ್ಯ, ಇವುಗಳ ಸಹಾಯದಿಂದ ಜೀವಾತ್ಮರು ಪರಮಾತ್ಮ
ನಲ್ಲಿ ಶರಣಾಗತರಾಗುವರು. ಅವಿದ್ಯಾಮಾಯೆ ಆರು ವಿಧವಾಗಿರು
ವುದು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ.
ಇಂತಹ ಅಹಂಕಾರ ನಾನು, ನನ್ನದು ಎಂಬ ಅಹಂಕಾರವನ್ನು ಹುಟ್ಟಿಸಿ
ಮಾನವನನ್ನು ಪ್ರಪಂಚದಲ್ಲಿ ಕಟ್ಟಿಹಾಕುವುದು. ಆದರೆ ವಿದ್ಯಾ
ಮಾಯೆ ಮೈದೋರಿದ ತಕ್ಷಣವೆ ಅವಿದ್ಯಾಮಾಯೆ ಸಂಪೂರ್ಣವಾಗಿ
ನಾಶವಾಗುವುದು.

೭. ಸೂರ್ಯ ಅಥವಾ ಚಂದ್ರ ಚಂಚಲವಾಗಿರುವ ನೀರಿ
ನಲ್ಲಿ ಪ್ರತಿಬಿಂಬಿಸುವುದಿಲ್ಲ. ಅದರಂತೆಯೆ ಮಾಯೆಯನ್ನು ಸಂಪೂರ್ಣ

ವಾಗಿ ಹೋಗಲಾಡಿಸುವ ತನಕ, ಅಂದರೆ ನಾನು, ನನ್ನದು
ಭಾವ ಹೋಗದೆ ಇರುವ ತನಕ ಈಶ್ವರನನ್ನು ನಾವು ಕಾಣಲ

೮. ಸೂರ್ಯ ಜಗತ್ತಿಗೆ ಬೆಳಕನ್ನು ಕೊಡುವನು.
ಒಂದು ಸಣ್ಣ ಮೋಡ ಸೂರ್ಯನನ್ನು ನಮಗೆ ಕಾಣದಂತೆ
ವುದು. ಅದರಂತೆಯೇ ಕೆಲಸಕ್ಕೆ ಬಾರದ ಮಾಯೆಯ ತೆರೆ
ವ್ಯಾಪಿಯಾದ, ಸರ್ವಸಾಕ್ಷಿಭೂತನಾದ, ಸಚ್ಚಿದಾನಂದ ಸ್ವರೂ
ನಮಗೆ ಕಾಣಿಸದಂತೆ ತಡೆಯುವುದು.

೯. ನೀರಿನ ಮೇಲಿರುವ ಪಾಚಿಯನ್ನು ನೀವು ನೂಕಿದರೆ
ಅದು ತನ್ನ ಸ್ಥಳಕ್ಕೇ ಬರುವುದು. ಇದರಂತೆಯೇ ನೀವು
ಯನ್ನು ನೂಕಿದರೆ ಸ್ವಲ್ಪ ಕಾಲದಲ್ಲಿ ಪುನಃ ಅದು ಬರುವುದು.
ಒಂದು ತೇಲುವ ಬೊಂಬನ್ನು ತಡೆಗಟ್ಟುವುದರಿಂದ ಅದು ಬ
ಮಾಡುವಂತೆ, ಜ್ಞಾನ ಮತ್ತು ಭಕ್ತಿಯಿಂದ ಪುನಃ ಮಾಯೆ ನ
ಆವರಿಸಿಕೊಳ್ಳದಂತೆ ಮಾಡಿಕೊಳ್ಳಬಹುದು. ಇಂತಹ ಅಡಚಣೆ
ದಾಟಿ ಮಾಯೆ ಬರಲಾರದು. ಆಗ ಸಚ್ಚಿದಾನಂದ ಒಂದೇ ಗ
ಸುವುದು.

೧೦. ದಕ್ಷಿಣೇಶ್ವರ ದೇವಸ್ಥಾನದ ವಾದ್ಯಶಾಲೆಯ ವ
ಕೋಣೆಯಲ್ಲಿ ಒಬ್ಬ ಸಾಧು ಕೆಲವು ಕಾಲ ವಾಸಿಸುತ್ತಿದ್ದನು.
ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ತನ್ನ ಕಾಲವನ್ನೆಲ್ಲ
ಧ್ಯಾನದಲ್ಲಿ ಕಳೆಯುತ್ತಿದ್ದನು. ಒಂದು ದಿನ ಅಕಸ್ಮಾತ್ತಾಗಿ
ಆಕಾಶದಲ್ಲಿ ಕವಿದುಕೊಂಡಿತು. ಕೆಲವು ಕಾಲದ ಮೇಲೆ
ಬಿರುಗಾಳಿ ಮೋಡವನ್ನು ಚದುರಿಸಿತು. ಸಾಧು ಕೋಣೆ
ಹೊರಗೆ ಬಂದು ಅಂಗಳದಲ್ಲಿ ನಗುತ್ತಾ ಕುಣಿದಾಡಲು ಮೊ
ಮಾಡಿದನು. ಇದನ್ನು ನೋಡಿ ಶ್ರೀರಾಮಕೃಷ್ಣರು ಅವನನ್ನು
ಕೋಣೆಯಲ್ಲಿ ಅಷ್ಟೊಂದು ಮೌನವಾಗಿ ಕಾಲಕಳೆಯುತ್ತಿದ್
ಇಂದು ಸಂತೋಷದಿಂದ ಕುಣಿದಾಡುತ್ತ ಇಷ್ಟು ಆನಂದವಾಗಿ
ಯಲ್ಲ?" ಎಂದು ಪ್ರಶ್ನಿಸಿದರು. ಅದಕ್ಕೆ ಸಾಧು "ಈ ಜೀವನ
ಕವಿದಿರುವ ಮಾಯೆಯ ಪ್ರಭಾವ ಹೀಗೆ. ಮೊದಲು ಶುಭ್ರ
ಆಕಾಶವಿರುವುದು. ಅನಂತರ ಇದ್ದಕ್ಕಿದ್ದಂತೆಯೇ ಮೋಡ ಕ
ವುದು. ಈಗ ಎಲ್ಲವೂ ಪುನಃ ಹಿಂದಿನಂತೆಯೇ ಶುಭ್ರವಾಗಿರು
ಎಂದನು.

## ೪. ಅವತಾರ

೧. ನದಿಯ ಮೇಲೆ ತೇಲುವ ಒಂದು ದೊಡ್ಡ ದೋಣಿ ನೂರಾರು ಜನರನ್ನು ಹೊತ್ತುಕೊಂಡು ಹೋಗುವುದು. ಆದರೂ ಮುಳುಗುವುದಿಲ್ಲ. ಅದೇ ನದಿಯಲ್ಲಿ ತೇಲುತ್ತಿರುವ ಒಂದು ಸಣ್ಣ ಮರದ ತುಂಡಿನ ಮೇಲೆ ಒಂದು ಕಾಗೆ ಕುಳಿತುಕೊಂಡರೂ ಅದು ಮುಳುಗಿ ಹೋಗುವುದು. ಇದರಂತೆಯೆ ಅವತಾರ ಜನ್ಮವೆತ್ತಿದಾಗ ಅವನ ದಯೆಯಿಂದ ನೂರಾರು ಜನ ಮುಕ್ತಿಯನ್ನು ಪಡೆಯುವರು. ಸಿದ್ಧಪುರುಷನಾದರೊ ತುಂಬಾ ಕಷ್ಟದಿಂದ ತನ್ನನ್ನು ಮಾತ್ರ ತಾನು ಉದ್ಧಾರಮಾಡಿಕೊಳ್ಳಬಲ್ಲ.

೨. ರೈಲ್ವೆ ಯಂತ್ರ ತಾನು ಗುರಿಯನ್ನು ಮುಟ್ಟುವುದಲ್ಲದೆ, ಅದರೊಂದಿಗೆ ಸಾಮಾನು ತುಂಬಿದ ಹಲವು ಗಾಡಿಗಳನ್ನೂ ಎಳೆದು ಕೊಂಡು ಹೋಗುವುದು. ಇದರಂತೆಯೆ ಅವತಾರ ಪುರುಷರು ಅನೇಕ ಜನರನ್ನು ದೇವರೆಡೆಗೆ ಕರೆದೊಯ್ಯುವರು.

## ೫. ಹಲವು ಬಗೆ ಮನುಷ್ಯರು

೧. ಮನುಷ್ಯ ಒಂದು ದಿಂಬಿನ ಚೀಲದಂತೆ. ಒಂದು ದಿಂಬಿನ ಚೀಲ ಕೆಂಪು, ಮತ್ತೊಂದು ಕಪ್ಪು ಇತ್ಯಾದಿಯಾಗಿರಬಹುದು. ಆದರೆ ಎಲ್ಲಾ ದಿಂಬುಗಳಲ್ಲಿರುವುದೂ ಒಂದೇ ತರಹದ ಹತ್ತಿ. ಇದರಂತೆಯೇ ಮನುಷ್ಯನೂ ಕೂಡ; ಒಬ್ಬ ಸುಂದರನಾಗಿರಬಹುದು, ಮತ್ತೊಬ್ಬನು ಕುರೂಪಿಯಾಗಿರಬಹುದು, ಮೂರನೆಯವನು ಸಾಧುವಾಗಿರಬಹುದು, ಮತ್ತೊಬ್ಬನು ದುಷ್ಟನಾಗಿರಬಹುದು. ಆದರೆ ಪರಮಾತ್ಮನು ಎಲ್ಲರಲ್ಲಿಯೂ ವಾಸಿಸುತ್ತಿರುವನು.

೨. ಎರಡು ಬಗೆಯ ಮನುಷ್ಯರು ನಮಗೆ ಸಾಧಾರಣವಾಗಿ ಕಾಣುವರು. ಒಬ್ಬರ ಸ್ವಭಾವ ಧಾನ್ಯಗಳನ್ನು ಕೇರುವ ಮರದಂತೆ ಇರುವುದು, ಮತ್ತೊಬ್ಬರದು ಜರಡಿಯಂತೆ ಇರುವುದು. ಕೇರುವ ಮರ ಜಳ್ಳನ್ನು ತೂರಿ ಕಾಳನ್ನು ಹೇಗೆ ಇಟ್ಟುಕೊಳ್ಳುವುದೊ ಅದರಂತೆಯೆ ಒಂದು ಬಗೆಯ ಮನುಷ್ಯರು ಕೆಲಸಕ್ಕೆ ಬಾರದ ಕಾಮ-ಕಾಂಚನಗಳನ್ನು ತೂರಿ ಪಡೆಯುವುದಕ್ಕೆ ಯೋಗ್ಯವಾದ ದೇವರೊಬ್ಬ

ನನ್ನೇ ಇಟ್ಟುಕೊಳ್ಳುತ್ತಾರೆ. ಜರಡಿಯು ಪದಾರ್ಥಗಳನ್ನು ಶೋ
ಕೆಲಸಕ್ಕೆ ಬಾರದುದನ್ನು ಇಟ್ಟುಕೊಳ್ಳುವಂತೆ, ಮತ್ತೊಂದು ಬ
ಜನರು ಪಡೆಯುವುದಕ್ಕೆ ಯೋಗ್ಯವಾದುದನ್ನು ಬಿಟ್ಟು ಕೆ
ಬಾರದ ಕಾಮಕಾಂಚನಗಳನ್ನು ಇಟ್ಟುಕೊಳ್ಳುತ್ತಾರೆ.

೩. ಪ್ರಾಪಂಚಿಕ ಮನಸ್ಸು ನೊಣದಂತೆ. ಯಾವಾ
ಹೇಸಿಗೆಯ ಮೇಲೆ ಇರುವುದನ್ನೇ ಪ್ರೀತಿಸುವುದು. ಮತ್ತಾವು
ಅದು ಪ್ರೀತಿಸುವುದಿಲ್ಲ. ಸುವಾಸನೆಯಾದ ಕಮಲದೊಳಗೆ
ವನ್ನು ಬಲವಂತದಿಂದ ಬಿಟ್ಟರೆ ಅದರ ಮನಸ್ಸಿಗೆ ಹಿತವಾಗುವು
ಇದರಂತೆಯೇ ಪ್ರಾಪಂಚಿಕ ಸ್ವಭಾವದವರು ಪ್ರಾಪಂಚಿಕ ವಸ
ನ್ನಲ್ಲದೆ ಬೇರೆ ಏನನ್ನೂ ಮಾತನಾಡಲು ಇಚ್ಛಿಸುವುದಿಲ್ಲ. ಬ
ದೇವರು ಮತ್ತು ಅವನಿಗೆ ಸಂಬಂಧಪಟ್ಟ ಮಾತುಗಳನ್ನು ಆಡುತ್ತಿ
ಸ್ಥಳದಿಂದ ಅವರು ಬಿಟ್ಟು ಹೋಗುವರು. ಕೆಲಸಕ್ಕೆ ಬಾರದ
ಹೊಡೆಯುವ ಸ್ಥಳಕ್ಕೆ ಹೋದಾಗ ಅವರ ಮನಸ್ಸಿಗೆ ಸಮಾಧಾನ

೪. ಬಲೆಯಲ್ಲಿ ಮೀನುಗಳು ಬಿದ್ದಾಗ ಕೆಲವು ಒದ್ದಾಡು
ಇಲ್ಲ, ಸುಮ್ಮನೇ ಇರುವುವು. ಮತ್ತೆ ಕೆಲವು ತಪ್ಪಿಸಿಕೊ
ಒದ್ದಾಡಿ ಕೊನೆಗೆ ಸುಮ್ಮನಾಗುವುವು. ಆದರೆ ಮೂರನೇ ಗುಂ
ಒದ್ದಾಡಿ ಕೊನೆಗೆ ಬಲೆಯನ್ನು ತೂತುಮಾಡಿಕೊಂಡು ಹೋಗು
ಇದರಂತೆಯೆ ಪ್ರಪಂಚದಲ್ಲಿ ಮೂರು ಬಗೆಯ ಜನರಿರು
ಬದ್ಧರು, ಮುಮುಕ್ಷುಗಳಾಗಲು ಯತ್ನಿಸುತ್ತಿರುವವರು ಮ
ಮುಕ್ತರು.

೫. ಬೆಸ್ತಳೊಬ್ಬಳು ಊರಿಗೆ ಹಿಂತಿರುಗುತ್ತಿದ್ದಾಗ ಕತ್ತ
ದೊಡ್ಡ ಮಳೆ ಬಂದಿತು. ಆಗ ಒಬ್ಬ ಹೂವಾಡಿಗನ ಮನೆ
ಅವಳು ತಂಗಿದಳು. ಹೂವಾಡಿಗನು ಅವಳನ್ನು ಬಹಳ ಆದರ
ಬರಮಾಡಿಕೊಂಡು, ರಾತ್ರಿಯನ್ನು ಹೂವು ಇಟ್ಟಿದ್ದ ಪಡಸಾಲೆ
ಕಳೆಯಬಹುದು ಎಂದು ಹೇಳಿದನು. ಇಷ್ಟು ಚೆನ್ನಾದ ಸ್ಥ
ಅವಳಿದ್ದರೂ ಅವಳಿಗೆ ನಿದ್ದೆ ಬರಲಿಲ್ಲ. ಸುತ್ತಲೂ ಇದ್ದ ಹ
ಗಿಡದಿಂದ ಬರುತ್ತಿದ್ದ ಸುವಾಸನೆಯಿಂದ ಅವಳಿಗೆ ನಿದ್ದೆ ಬರಲಿಲ್ಲ
ಕೊನೆಗೆ ಕಂಡುಹಿಡಿದಳು. ಆಗ ಅವಳು ಖಾಲಿಯಾದ ಮ
ಬುಟ್ಟಿಯೊಳಗೆ ಸ್ವಲ್ಪ ನೀರನ್ನು ಚುಮುಕಿಸಿ ಅದನ್ನು ಮು
ಹತ್ತಿರ ಇಟ್ಟುಕೊಂಡಳು. ಸ್ವಲ್ಪ ಹೊತ್ತಿನಲ್ಲೇ ಚೆನ್ನಾಗಿ

ತ್ತಿತು. ಇದರಂತೆಯೇ ಪ್ರಾಪಂಚಿಕ ಸ್ವಭಾವದ ಮನುಷ್ಯರೂ ಕೂಡ. ಅವರಿಗೂ ಕೆಲಸಕ್ಕೆ ಬಾರದ ದುರ್ಗಂಧದಿಂದ ಕೂಡಿದ ವಸ್ತುಗಳಲ್ಲದೆ ಮತ್ತೇನೂ ರುಚಿಸುವುದಿಲ್ಲ.

೬. ಪ್ರಾಪಂಚಿಕ ಮನುಷ್ಯನೊಂದಿಗೆ ಮಾತನಾಡಿದರೆ ಅವನ ಮನಸ್ಸು ಪ್ರಾಪಂಚಿಕ ಬಯಕೆಗಳು ಮತ್ತು ಆಲೋಚನೆಗಳಿಂದ ತುಂಬಿ ತುಳುಕಾಡುತ್ತಿರುವುದೆಂದು ತೋರುವುದು. ಸಣ್ಣ ಹಕ್ಕಿಯ ಹಿಕ್ಕೆಯು ಅದು ತಿಂದ ಧಾನ್ಯದಿಂದ ಕೂಡಿರುವಂತೆ, ಇಂತಹ ಸ್ವಭಾವದ ಜನ ಬಯಸುವುದೇ ಪ್ರಾಪಂಚಿಕ ವಿಷಯಗಳನ್ನು. ಅವರು ಧಾರ್ಮಿಕ ವಿಷಯಗಳನ್ನು ಕೇಳಲು ಇಚ್ಛಿಸುವುದಿಲ್ಲ.

೭. ಎರಡು ತರಹ ನೊಣಗಳಿವೆ. ಒಂದು ಜೇನುನೊಣ; ಅದು ಜೇನನ್ನು ಮಾತ್ರ ಹೀರುವುದು. ಮತ್ತೊಂದು ಸಾಧಾರಣ ನೊಣ; ಅದು ಜೇನನ್ನು ಮಾತ್ರ ಕುಡಿಯುವುದಿಲ್ಲ. ಸಮಯ ಬಿದ್ದರೆ ಕೆಟ್ಟಗಾಯದ ಮೇಲೂ ಕೂಡುವುದು. ಇದರಂತೆಯೇ ಮನುಷ್ಯರೂ ಕೂಡ. ಯಾರು ದೇವರನ್ನು ಪ್ರೀತಿಸುತ್ತಾರೆಯೊ ಅವರು ದೇವರಲ್ಲದೆ ಮತ್ತಾವ ವಿಷಯಗಳನ್ನೂ ಮಾತನಾಡುವುದಿಲ್ಲ. ಆದರೆ ಯಾರಿಗೆ ಪ್ರಾಪಂಚಿಕ ವಸ್ತುಗಳ ಮೇಲೆ ಆಸಕ್ತಿ ಇದೆಯೊ ಅವರು ಇದುವರೆವಿಗೂ ಕೇಳುತ್ತಿದ್ದ ದೇವರ ವಿಚಾರವನ್ನು ಬಿಟ್ಟು ಕಾಮ ಕಾಂಚನ ಮಾತನ್ನು ಮೊದಲುಮಾಡಿದರೆ, ತಕ್ಷಣವೆ ಅದನ್ನು ಕೇಳಲು ಪ್ರಾರಂಭಿಸುವರು.

೮. ಪ್ರಾಪಂಚಿಕ ವಿಷಯಗಳಲ್ಲಿ ಮಗ್ನನಾದವನ ಸ್ವಭಾವವೇನೆಂದರೆ, ತಾನು ಧಾರ್ಮಿಕ ಪ್ರವಚನ ಭಜನೆ ಮುಂತಾದುವನ್ನು ಕೇಳದೆ ಇರುವುದು ಮಾತ್ರವಲ್ಲ, ಉಳಿದವರು ಇದನ್ನು ಕೇಳುವುದನ್ನೂ ತಡೆಯುತ್ತಾನೆ. ಧರ್ಮ, ಧಾರ್ಮಿಕ ಪುರುಷರು ಇವರನ್ನು ನಿಂದಿಸುತ್ತಾನೆ. ದೇವರನ್ನು ಧ್ಯಾನಮಾಡುವವರನ್ನು ನೋಡಿ ಅಣಕಿಸುತ್ತಾನೆ.

೯. ಮೊಸಳೆಗೆ ಯಾವ ಶಸ್ತ್ರವೂ ಕೂಡ ಛೇದಿಸಲಾರದಂತಹ ಚರ್ಮವಿದೆ. ಅದರಂತೆಯೆ ಪ್ರಾಪಂಚಿಕ ವಿಷಯದಲ್ಲಿ ನಿರತನಾದವನಿಗೆ ನೀವು ಧಾರ್ಮಿಕ ವಿಷಯಗಳನ್ನು ಎಷ್ಟು ಹೇಳಿದರೂ ಅದು ಅವನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ.

೧೦. ಸೂರ್ಯನ ರಶ್ಮಿ ಎಲ್ಲಾ ಕಡೆಯಲ್ಲಿಯೂ
ತ್ತದೆ. ಆದರೆ ಎಲ್ಲಿ ಅದು ನೀರು, ಕನ್ನಡಿ, ನುಣುಪಾದ
ಮುಂತಾದುವುಗಳ ಮೇಲೆ ಬೀಳುತ್ತದೆಯೊ ಆ ಮಧ್ಯವರ್ತಿ
ಸೂರ್ಯರಶ್ಮಿಯನ್ನು ಪ್ರತಿಬಿಂಬಿಸುತ್ತದೆ. ಇದರಂತೆಯೇ
ಎಲ್ಲಾ ಕಡೆಯಲ್ಲಿ ಇದ್ದರೂ ಯಾರು ಶುದ್ಧಾತ್ಮರೊ ಅವರಲ್ಲಿ
ವ್ಯಕ್ತನಾಗುತ್ತಾನೆ.

೧೧. ಅನೇಕ ಕಡಬುಗಳು ನೋಡಲು ಒಂದೇಯಾಗಿ
ಬಹುದು. ಆದರೆ ಅದರಲ್ಲಿ ಹಲವು ಬಗೆಯ ಹೂರಣಗಳ
ಬಹುದು. ಕೆಲವದರಲ್ಲಿ ತೆಂಗಿನಕಾಯಿಯ ಹೂರಣ, ಕೆಲ
ಖೋವ ಇತ್ಯಾದಿ. ಇದರಂತೆಯೇ ಮನುಷ್ಯನ ದೇಹವೆಲ್ಲ
ಬಗೆಯ ವಸ್ತುವಿನಿಂದ ಆಗಿದ್ದರೂ ಮನುಷ್ಯರು ತಮ್ಮ ಗು
ತಕ್ಕಂತೆ ಬೇರೆ ಬೇರೆಯಾಗಿ ಕಾಣುವರು.

೧೨. ನೀರೆಲ್ಲ ನಾರಾಯಣ. ಆದರೆ ಎಲ್ಲಾ ವಿಧದ
ಕುಡಿಯಲು ಯೋಗ್ಯವಲ್ಲ. ಇದರಂತೆಯೇ ದೇವರು ಸರ್ವ
ಯಾಗಿದ್ದರೂ, ಎಲ್ಲಾ ಸ್ಥಳವೂ ದರ್ಶನಕ್ಕೆ ಯೋಗ್ಯವಲ್ಲ.
ನೀರನ್ನು ಕಾಲು ತೊಳೆಯುವುದಕ್ಕೆ ಉಪಯೋಗಿಸಬಹುದು
ವನ್ನು ಬಾಯಿ ಮುಕ್ಕುಳಿಸುವುದಕ್ಕೆ, ಮೂರನೆಯದನ್ನು ಕು
ವುದಕ್ಕೆ; ಮತ್ತೊಂದನ್ನು ಮುಟ್ಟಲೂ ಕೂಡ ಯೋಗ್ಯವಲ್ಲ.
ರಂತೆಯೇ ಕೆಲವು ಸ್ಥಳ ದರ್ಶನಕ್ಕೆ ಯೋಗ್ಯ, ಮತ್ತೆ ಕೆಲವಕ್ಕೆ
ದಿಂದಲೇ ನಿಂತು ನಮಸ್ಕಾರ ಮಾಡಬೇಕು.

೧೩. ದೇವರು ಹುಲಿಯಲ್ಲಿಯೂ ಇರುವನು ಎಂಬುದ
ನಿಜ. ಆದರೆ ನಾವು ಅದರ ಹತ್ತಿರ ಹೋಗಬಾರದು. ಇದರಂ
ಅತಿ ದುಷ್ಟನಲ್ಲಿಯೂ ಕೂಡ ದೇವರು ಇರುವನು ಎಂಬುದೇನೊ
ಆದರೆ ಅವರೊಂದಿಗೆ ಸಂಬಂಧವನ್ನು ಬೆಳೆಸುವುದು ಯೋಗ್ಯವ

೧೪. ಒಬ್ಬ ಗುರು ಎಲ್ಲರೂ ನಾರಾಯಣನ ಸ್ವರೂಪ
ಬೋಧಿಸಿದನು. ಶಿಷ್ಯನು ಅಕ್ಷರಶಃ ಇದನ್ನು ನಿಜವೆಂದು
ಕೊಂಡನು. ಒಂದು ದಿನ ಶಿಷ್ಯ ದಾರಿಯಲ್ಲಿ ಒಂದು ಆನೆ
ಕಂಡನು. ಅದು ಇವನ ಕಡೆಗೆ ಓಡಿಬರುತ್ತಿತ್ತು. ಮೇಲಿದ್ದ
ತನು ದೂರ ಹೋಗು, ದೂರ ಹೋಗು–ಎಂದು ಕೂಗುತ್ತಿ
ಶಿಷ್ಯನು ಮನಸ್ಸಿನಲ್ಲಿ ಹೀಗೆ ಆಲೋಚಿಸುತ್ತಿದ್ದ: ನಾನೇಕೆ

ಹೋಗಬೇಕು, ನಾನೂ ನಾರಾಯಣ, ಆನೆಯೂ ನಾರಾಯಣ. ನಾರಾಯಣನಿಂದ ನಾರಾಯಣನಿಗೆ ಏನು ಅಂಜಿಕೆ! ಹೀಗೆ ಆಲೋಚಿಸುತ್ತ ದಾರಿಯನ್ನು ಬಿಡಲಿಲ್ಲ. ಕೊನೆಗೆ ಆನೆಯು ತನ್ನ ಸೊಂಡಲಿನಿಂದ ಅವನನ್ನು ಹಿಡಿದು ಪಕ್ಕಕ್ಕೆ ಎಸೆಯಿತು. ಅವನಿಗೆ ತುಂಬಾ ನೋವಾಯಿತು. ಹೋಗಿ ಗುರುವಿಗೆ ಈ ಸಂಗತಿಯನ್ನೆಲ್ಲ ಹೇಳಿದನು. ಅದಕ್ಕೆ ಗುರು "ಮಗು! ನೀನು ಹೇಳಿದ್ದೇನೊ ಸರಿ. ನೀನು ನಾರಾಯಣ, ಆನೆಯೂ ನಾರಾಯಣ; ಆದರೆ ನಿನ್ನನ್ನು ದೂರ ಹೋಗು ಎಂದ ಮಾಹುತ ನಾರಾಯಣನ ಎಚ್ಚರಿಕೆಯನ್ನು ಏತಕ್ಕೆ ಗಮನಕ್ಕೆ ತೆಗೆದುಕೊಳ್ಳಲಿಲ್ಲ?" ಎಂದನು.

೧೫. ಸತ್ಪುರುಷರ ಕೋಪವೆನ್ನುವುದು ನೀರಿನ ಮೇಲೆ ಬರೆದ ಗೆರೆಯಂತೆ. ಬೇಗ ಅಳಿಸಿಹೋಗುವುದು.

೧೬. ಬ್ರಾಹ್ಮಣನ ಮಗ ನಿಸ್ಸಂದೇಹವಾಗಿಯೂ ಜಾತಿಯಲ್ಲಿ ಬ್ರಾಹ್ಮಣನೆ. ಆದರೆ ಅವರಲ್ಲಿ ಕೆಲವರು ದೊಡ್ಡ ವಿದ್ಯಾವಂತರಾಗುವರು, ಪುರೋಹಿತರಾಗುವರು, ಕೆಲವರು ಅಡಿಗೆಯವರಾಗುವರು, ಮತ್ತೆ ಕೆಲವರು ಸೂಳೆಯರ ಮನೆಯ ಮುಂದೆ ನೆಲದ ಮೇಲೆ ಹೊರಳಾಡುವರು.

೧೭. ಒರೆಗಲ್ಲಿನಿಂದ ಹಿತ್ತಾಳೆಗೂ ಚಿನ್ನಕ್ಕೂ ಇರುವ ವ್ಯತ್ಯಾಸ ತಿಳಿಯಬಹುದು. ಇದರಂತೆಯೇ ಒಬ್ಬನ ಸ್ವಭಾವ, ಕಪಟವೆ ಅಥವಾ ಸತ್ಯವೆ ಎಂಬುದನ್ನು ದೇವರು ಪರೀಕ್ಷಿಸುವನು.

೧೮. ಮನುಷ್ಯರಲ್ಲಿ ಎರಡು ವಿಧ. ಹೆಸರಿಗೆ ಮಾತ್ರ ಮನುಷ್ಯರು ಮತ್ತು ಪ್ರಾಜ್ಞರಾದಂತಹವರು. ಯಾರು ದೇವರಿಗಾಗಿ ಹಂಬಲಿಸುವರೋ ಅವರು ಕೊನೆಯ ಗುಂಪಿಗೆ ಸೇರಿದವರು. ಯಾರು ಕಾಮಕಾಂಚನಗಳನ್ನು ಮಾತ್ರ ಆಶಿಸುತ್ತಾರೆಯೋ ಅವರು ಸಾಧಾರಣ ಮನುಷ್ಯರು.

೧೯. ಪ್ರಾಪಂಚಿಕರನ್ನು ಯಾವುದೂ ಜಾಗ್ರತರನ್ನಾಗಿ ಮಾಡುವುದಿಲ್ಲ. ಈ ಜೀವನದಲ್ಲಿ ದುಃಖ ಕಷ್ಟಗಳೇನೂ ಅವರಿಗೆ ಕಡಿಮೆಯಿಲ್ಲ; ಆದರೂ ಅವರು ಇದರಿಂದ ಸ್ವಲ್ಪವೂ ಬುದ್ಧಿವಂತರಾಗುವುದಿಲ್ಲ. ಒಂಟೆಯನ್ನು ನೋಡಿ; ಅದಕ್ಕೆ ಮುಳ್ಳಿನ ಗಿಡ ಕಂಡರೆ ತುಂಬ ಇಷ್ಟ. ಬಾಯಿಯಿಂದ ರಕ್ತ ಸುರಿಯುತ್ತಿದ್ದರೂ ಅದು ತಿನ್ನುವುದನ್ನು ಬಿಡುವುದಿಲ್ಲ. ಅಂತೆಯೇ ಇವರು ಎಂತಹ ವಿಪತ್ತು ಬಂದರೂ ಪರಿ

ಗಣಿಸುವುದಿಲ್ಲ. ಸ್ವಲ್ಪ ದಿನಗಳಲ್ಲಿ, ಹಿಂದೆ ಏನೂ ಸಂ
ವೆಂದು ತಿಳಿಯುವರು.

ಈ ವಿಷಯಗಳಲ್ಲಿ ಎಚ್ಚರಿಕೆಯಿಂದಿರು: (೧) ನೀರಿನಂ
ವಾಗಿ ಮಾತನಾಡುವವನು. (೨) ಏನನ್ನೂ ಮಾತನಾಡದೆ
ಗಿರುವವನು. (೩) ಕಿವಿಯಮೇಲೆ ತುಲಸಿಪತ್ರವನ್ನು ಇಟ್ಟು
ತನ್ನ ಭಕ್ತಿಯನ್ನು ಹೊರಗೆ ಪ್ರದರ್ಶಿಸುವವನು. (೪) ದೊಡ
ಕನ್ನು ಇಳಿ ಬಿಟ್ಟುಕೊಂಡ ಹೆಂಗಸು. (೫) ಪಾಚಿಯಿಂದ
ಕೊಳದ ನೀರು—ತುಂಬಾ ಅನಾರೋಗ್ಯಕರವಾದುದು.

## ೬. ಗುರು

**೧.** ಗುರು ಒಬ್ಬನೆ. ಆದರೆ ಉಪಗುರುಗಳು ಹಲ
ಇರಬಹುದು. ಉಳಿದವರಿಂದ ನಾವು ಏನನ್ನಾದರೂ ಕಲಿತ
ವುದಕ್ಕೆ ಉಪಗುರುಗಳೆಂದು ಹೆಸರು. ಭಾಗವತದಲ್ಲಿ ಬರು
ವಾಸಿಯಾದ ಅವಧೂತರಿಗೆ ಇಪ್ಪತ್ತು ನಾಲ್ಕು ಉಪಗು
ರೆಂದು ಹೇಳಿದೆ.

**೨.** ಒಂದು ದಿನ ಅವಧೂತನು ಹುಲ್ಲಿನ ಮೆದೆಯ
ಹೋಗುತ್ತಿದ್ದಾಗ ತನ್ನ ಸಮೀಪಕ್ಕೆ ಒಂದು ಮದುವೆಯ ಮೆ
ರಭಸ ವಾದ್ಯಧ್ವನಿಯೊಡಗೂಡಿ ವಿಜೃಂಭಣೆಯಿಂದ ಬರುತ್ತಿರ
ಕಂಡನು. ತನ್ನ ಸಮೀಪದಲ್ಲಿಯೆ ಬೇಡನೊಬ್ಬನು ಮೃಗ
ಗುರಿಯಿಡುವುದರಲ್ಲಿ ನಿರತನಾಗಿದ್ದನು. ವಾದ್ಯಧ್ವನಿ ಮತ್ತು
ಣೆಯ ಕಡೆ ಒಂದು ಸಲವಾದರೂ ಕಣ್ಣೆತ್ತಿ ನೋಡಲಿಲ್ಲ.
ತನು ಬೇಟೆಗಾರನಿಗೆ ನಮಸ್ಕರಿಸುತ್ತ "ಅಯ್ಯ! ನೀನು ನನ
ನಾನು ಧ್ಯಾನಕ್ಕೆ ಕುಳಿತಾಗ, ಈಗ ನೀನು ಬೇಟೆಯಾಡುವ
ಮೇಲೆ ಮನಸ್ಸಿಟ್ಟಿರುವಂತೆ ನನ್ನ ಮನಸ್ಸು ಏಕಾಗ್ರವಾಗಲಿ"

**೩.** ಬೆಸ್ತನೊಬ್ಬನು ಒಂದು ಕೊಳದಲ್ಲಿ ಮೀನನ್ನು
ತ್ತಿದ್ದನು. ಅವಧೂತನು ಅವನ ಸಮೀಪಕ್ಕೆ ಬಂದು "
ಊರಿಗೆ ರಸ್ತೆ ಯಾವುದು?" ಎಂದು ಕೇಳಿದನು. ಗಾಣಕ್ಕೆ
ಬೆಂಡು, ಗಾಣವನ್ನು ಇನ್ನೇನು ಮೀನು ತಿನ್ನುತ್ತಿದೆ ಎ
ತೋರುತ್ತಿತ್ತು. ಆದಕಾರಣ ಅವನು ಇವನಿಗೆ ಯಾವ ಉತ್

ೇಳಲಿಲ್ಲ. ತನ್ನ ಗಾಣದ ಮೇಲೆ ಮನಸ್ಸನ್ನೆಲ್ಲ ಏಕಾಗ್ರಮಾಡಿದ್ದನು. ೂದಲು ಮೀನನ್ನು ಹಿಡಿದಾದ ಮೇಲೆ ತಿರುಗಿ ನೋಡಿ "ನೀನು ನು ಹೇಳುತ್ತಿದ್ದೆ?" ಎಂದು ಕೇಳಿದನು. ಅವಧೂತನು ಅವನಿಗೆ ಮಸ್ಕಾರಮಾಡಿ "ಅಯ್ಯ! ನೀನು ನನಗೆ ಗುರು. ನಾನು ನನ್ನ ಇಷ್ಟ ೇವತೆಯ ಮೇಲೆ ಧ್ಯಾನಮಾಡುವಾಗ ನಿನ್ನ ಉದಾಹರಣೆಯನ್ನು ನುಸರಿಸುವಂತೆ ಪ್ರಯತ್ನಿಸುವೆನು. ನನ್ನ ಧ್ಯಾನ ಪೂರ್ತಿಯಾಗುವ ರೆಗೆ ಮತ್ತಾವ ಕೆಲಸದ ಮೇಲೂ ಮನಸ್ಸು ಹೋಗದಿರಲಿ" ಎಂದನು.

೪. ಕೊಕ್ಕಿನಲ್ಲಿ ಒಂದು ಮೀನನ್ನು ಹಿಡಿದುಕೊಂಡಿದ್ದ ಹದ್ದನ್ನು ೋಡಿ, ಇತರ ಹದ್ದುಗಳೂ ಕಾಗೆಗಳೂ ಅದನ್ನು ಹಿಂಬಾಲಿಸುತ್ತ ದನ್ನು ಕುಕ್ಕಿ ಅದರ ಬಾಯಲ್ಲಿದ್ದ ಮೀನನ್ನು ಕಸಿದುಕೊಳ್ಳುವುದಕ್ಕೆ ್ರಯತ್ನಿಸುತ್ತಿದ್ದುವು. ಯಾವ ದಿಕ್ಕಿನಲ್ಲಿ ಅದು ಹೋದರೂ ಅದರ ಂಸಕರು ಅದನ್ನು ಹಿಂಬಾಲಿಸಿದುವು. ಅನಂತರ ಬೇಜಾರಿನಿಂದ ೀನನ್ನು ಕೆಡಹುವಂತೆ ಮಾಡಿದುವು. ಮತ್ತೊಂದು ಹದ್ದು ಆ ೀನನ್ನು ಹಿಡಿಯಿತು. ತಕ್ಷಣವೆ ಗುಂಪು ಅದರ ಕಡೆಗೆ ತಿರುಗಿತು. ೊದಲನೆ ಹದ್ದನ್ನು ಸುಮ್ಮನೆ ಬಿಟ್ಟವು. ಅದು ಸುಮ್ಮನೆ ಒಂದು ಮರದ ಕೊಂಬೆಯ ಮೇಲೆ ಕುಳಿತುಕೊಂಡಿತು. ಈ ಹಕ್ಕಿಯ ಶಾಂತವಾದ ಸಮಾಧಾನಸ್ಥಿತಿಯನ್ನು ಕಂಡು ಅವಧೂತನು ಅದಕ್ಕೆ ನಮಸ್ಕಾರಮಾಡುತ್ತ ಹೀಗೆಂದನು: "ನೀನು ನನ್ನ ಗುರು. ಒಬ್ಬನು ತನ್ನ ಉಪಾಧಿಗಳನ್ನು ಬಿಟ್ಟಾಗ ಮಾತ್ರ ಚಿತ್ತಶಾಂತಿ ಸಾಧ್ಯ. ಇಲ್ಲದೇ ಇದ್ದರೆ ಹೆಜ್ಜೆಹೆಜ್ಜೆಗೂ ಅಪಾಯ ತಪ್ಪದು ಎಂಬುದನ್ನು ನೀನು ನನಗೆ ಕಲಿಸಿದೆ."

೫. ಒಂದು ಬಕ ಮೀನನ್ನು ಹಿಡಿಯುವುದಕ್ಕಾಗಿ ಕೆಸರಿನ ಮೇಲೆ ನಿಧಾನವಾಗಿ ಹೋಗುತ್ತಿತ್ತು. ಹಿಂದೆ ಬೇಡನೊಬ್ಬ ಅದನ್ನು ಹೊಡೆಯುವುದಕ್ಕೆ ಬಾಣದಿಂದ ಗುರಿಯಿಡುತ್ತಿದ್ದನು. ಆದರೆ ಹಕ್ಕಿಗೆ ಸ್ವಲ್ಪವೂ ಇದರ ಲಕ್ಷ್ಯವಿರಲಿಲ್ಲ. ಅವಧೂತ ಆ ಬಕಕ್ಕೆ ನಮಸ್ಕರಿಸುತ್ತ "ನಾನು ಧ್ಯಾನಕ್ಕೆ ಕುಳಿತಾಗ ನನ್ನ ಹಿಂದೆ ಯಾರು ಇರುವರು ಎಂಬುದನ್ನು ನೋಡದೆ ನಿನ್ನ ಆದರ್ಶವನ್ನು ಅನುಸರಿಸೋಣ" ಎಂದನು.

೬. ಅವಧೂತನಿಗೆ ಜೇನುನೊಣದಲ್ಲಿ ಇನ್ನೊಬ್ಬ ಗುರು ಸಿಕ್ಕಿದನು. ಜೇನುನೊಣ ತುಂಬಾ ಕಷ್ಟಪಟ್ಟು ಹಲವು ದಿನಗಳಿಂದ ಜೇನನ್ನು ಕೂಡಿಡುತ್ತಿತ್ತು. ಎಲ್ಲಿಂದಲೋ ಒಬ್ಬ ಮನುಷ್ಯನು ಬಂದು

ಗಣಿಸುವುದಿಲ್ಲ. ಸ್ವಲ್ಪ ದಿನಗಳಲ್ಲಿ, ಹಿಂದೆ ಏನೂ ಸಂಭ
ವೆಂದು ತಿಳಿಯುವರು.

ಈ ವಿಷಯಗಳಲ್ಲಿ ಎಚ್ಚರಿಕೆಯಿಂದಿರು: (೧) ನೀರಿನಂತೆ
ವಾಗಿ ಮಾತನಾಡುವವನು. (೨) ಏನನ್ನೂ ಮಾತನಾಡದೆ ಮ
ಗಿರುವವನು. (೩) ಕಿವಿಯಮೇಲೆ ತುಲಸಿಪತ್ರವನ್ನು ಇಟ್ಟುಕೆ
ತನ್ನ ಭಕ್ತಿಯನ್ನು ಹೊರಗೆ ಪ್ರದರ್ಶಿಸುವವನು. (೪) ದೊಡ್ಡ
ಕನ್ನು ಇಳಿ ಬಿಟ್ಟುಕೊಂಡ ಹೆಂಗಸು. (೫) ಪಾಚಿಯಿಂದ ತ
ಕೊಳದ ನೀರು—ತುಂಬಾ ಅನಾರೋಗ್ಯಕರವಾದುದು.

## ೬. ಗುರು

೧. ಗುರು ಒಬ್ಬನೆ. ಆದರೆ ಉಪಗುರುಗಳು ಹಲವು
ಇರಬಹುದು. ಉಳಿದವರಿಂದ ನಾವು ಏನನ್ನಾದರೂ ಕಲಿತುಕ
ವುದಕ್ಕೆ ಉಪಗುರುಗಳೆಂದು ಹೆಸರು. ಭಾಗವತದಲ್ಲಿ ಬರುವ
ವಾಸಿಯಾದ ಅವಧೂತರಿಗೆ ಇಪ್ಪತ್ತು ನಾಲ್ಕು ಉಪಗುರು
ರೆಂದು ಹೇಳಿದೆ.

೨. ಒಂದು ದಿನ ಅವಧೂತನು ಹುಲ್ಲಿನ ಮೆದೆಯ
ಹೋಗುತ್ತಿದ್ದಾಗ ತನ್ನ ಸಮೀಪಕ್ಕೆ ಒಂದು ಮದುವೆಯ ಮೆ
ರಭಸ ವಾದ್ಯಧ್ವನಿಯೊಡಗೂಡಿ ವಿಜೃಂಭಣೆಯಿಂದ ಬರುತ್ತಿರುವ
ಕಂಡನು. ತನ್ನ ಸಮೀಪದಲ್ಲಿಯೆ ಬೇಡನೊಬ್ಬನು ಮೃಗದ
ಗುರಿಯಿಡುವುದರಲ್ಲಿ ನಿರತನಾಗಿದ್ದನು. ವಾದ್ಯಧ್ವನಿ ಮತ್ತು ವಿ
ಣೆಯ ಕಡೆ ಒಂದು ಸಲವಾದರೂ ಕಣ್ಣೆತ್ತಿ ನೋಡಲಿಲ್ಲ. ಅ
ತನು ಬೇಟೆಗಾರನಿಗೆ ನಮಸ್ಕರಿಸುತ್ತ "ಅಯ್ಯ! ನೀನು ನನಗೆ
ನಾನು ಧ್ಯಾನಕ್ಕೆ ಕುಳಿತಾಗ, ಈಗ ನೀನು ಬೇಟೆಯಾಡುವ
ಮೇಲೆ ಮನಸ್ಸಿಟ್ಟಿರುವಂತೆ ನನ್ನ ಮನಸ್ಸು ಏಕಾಗ್ರವಾಗಲಿ" ಎ

೩. ಬೆಸ್ತನೊಬ್ಬನು ಒಂದು ಕೊಳದಲ್ಲಿ ಮೀನನ್ನು ಹಿ
ತ್ತಿದ್ದನು. ಅವಧೂತನು ಅವನ ಸಮೀಪಕ್ಕೆ ಬಂದು "ಅಣ
ಊರಿಗೆ ರಸ್ತೆ ಯಾವುದು?" ಎಂದು ಕೇಳಿದನು. ಗಾಣಕ್ಕೆ
ಬೆಂದು, ಗಾಣವನ್ನು ಇನ್ನೇನು ಮೀನು ತಿನ್ನುತ್ತಿದೆ ಎಂಬ
ತೋರುತ್ತಿತ್ತು. ಆದಕಾರಣ ಅವನು ಇವನಿಗೆ ಯಾವ ಉತ್ತರ

ಕೇಳಲಿಲ್ಲ. ತನ್ನ ಗಾಣದ ಮೇಲೆ ಮನಸ್ಸನ್ನೆಲ್ಲ ಏಕಾಗ್ರಮಾಡಿದ್ದನು. ಮೊದಲು ಮೀನನ್ನು ಹಿಡಿದಾದ ಮೇಲೆ ತಿರುಗಿ ನೋಡಿ "ನೀನು ಏನು ಹೇಳುತ್ತಿದ್ದೆ?" ಎಂದು ಕೇಳಿದನು. ಅವಧೂತನು ಅವನಿಗೆ ನಮಸ್ಕಾರಮಾಡಿ "ಅಯ್ಯ! ನೀನು ನನಗೆ ಗುರು. ನಾನು ನನ್ನ ಇಷ್ಟ ದೇವತೆಯ ಮೇಲೆ ಧ್ಯಾನಮಾಡುವಾಗ ನಿನ್ನ ಉದಾಹರಣೆಯನ್ನು ಅನುಸರಿಸುವಂತೆ ಪ್ರಯತ್ನಿಸುವೆನು. ನನ್ನ ಧ್ಯಾನ ಪೂರ್ತಿಯಾಗುವ ವರೆಗೆ ಮತ್ತಾವ ಕೆಲಸದ ಮೇಲೂ ಮನಸ್ಸು ಹೋಗದಿರಲಿ" ಎಂದನು.

೪. ಕೊಕ್ಕಿನಲ್ಲಿ ಒಂದು ಮೀನನ್ನು ಹಿಡಿದುಕೊಂಡಿದ್ದ ಹದ್ದನ್ನು ನೋಡಿ, ಇತರ ಹದ್ದುಗಳೂ ಕಾಗೆಗಳೂ ಅದನ್ನು ಹಿಂಬಾಲಿಸುತ್ತ ಅದನ್ನು ಕುಕ್ಕಿ ಅದರ ಬಾಯಲ್ಲಿದ್ದ ಮೀನನ್ನು ಕಸಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದುವು. ಯಾವ ದಿಕ್ಕಿನಲ್ಲಿ ಅದು ಹೋದರೂ ಅದರ ಹಿಂಸಕರು ಅದನ್ನು ಹಿಂಬಾಲಿಸಿದುವು. ಅನಂತರ ಬೇಜಾರಿನಿಂದ ಮೀನನ್ನು ಕೆಡಹುವಂತೆ ಮಾಡಿದುವು. ಮತ್ತೊಂದು ಹದ್ದು ಆ ಮೀನನ್ನು ಹಿಡಿಯಿತು. ತಕ್ಷಣವೆ ಗುಂಪು ಅದರ ಕಡೆಗೆ ತಿರುಗಿತು. ಮೊದಲನೆ ಹದ್ದನ್ನು ಸುಮ್ಮನೆ ಬಿಟ್ಟವು. ಅದು ಸುಮ್ಮನೆ ಒಂದು ಮರದ ಕೊಂಬೆಯ ಮೇಲೆ ಕುಳಿತುಕೊಂಡಿತು. ಈ ಹಕ್ಕಿಯ ಶಾಂತವಾದ ಸಮಾಧಾನಸ್ಥಿತಿಯನ್ನು ಕಂಡು ಅವಧೂತನು ಅದಕ್ಕೆ ನಮಸ್ಕಾರಮಾಡುತ್ತ ಹೀಗೆಂದನು: "ನೀನು ನನ್ನ ಗುರು. ಒಬ್ಬನು ತನ್ನ ಉಪಾಧಿಗಳನ್ನು ಬಿಟ್ಟಾಗ ಮಾತ್ರ ಚಿತ್ತಶಾಂತಿ ಸಾಧ್ಯ. ಇಲ್ಲದೇ ಇದ್ದರೆ ಹೆಜ್ಜೆಹೆಜ್ಜೆಗೂ ಅಪಾಯ ತಪ್ಪದು ಎಂಬುದನ್ನು ನೀನು ನನಗೆ ಕಲಿಸಿದೆ."

೫. ಒಂದು ಬಕ ಮೀನನ್ನು ಹಿಡಿಯುವುದಕ್ಕಾಗಿ ಕೆಸರಿನ ಮೇಲೆ ನಿಧಾನವಾಗಿ ಹೋಗುತ್ತಿತ್ತು. ಹಿಂದೆ ಬೇಡನೊಬ್ಬ ಅದನ್ನು ಹೊಡೆಯುವುದಕ್ಕೆ ಬಾಣದಿಂದ ಗುರಿಯಿಡುತ್ತಿದ್ದನು. ಆದರೆ ಹಕ್ಕಿಗೆ ಸ್ವಲ್ಪವೂ ಇದರ ಲಕ್ಷ್ಯವಿರಲಿಲ್ಲ. ಅವಧೂತ ಆ ಬಕಕ್ಕೆ ನಮಸ್ಕರಿಸುತ್ತ "ನಾನು ಧ್ಯಾನಕ್ಕೆ ಕುಳಿತಾಗ ನನ್ನ ಹಿಂದೆ ಯಾರು ಇರುವರು ಎಂಬುದನ್ನು ನೋಡದೆ ನಿನ್ನ ಆದರ್ಶವನ್ನು ಅನುಸರಿಸೋಣ" ಎಂದನು.

೬. ಅವಧೂತನಿಗೆ ಜೇನುನೊಣದಲ್ಲಿ ಇನ್ನೊಬ್ಬ ಗುರು ಸಿಕ್ಕಿದನು. ಜೇನುನೊಣ ತುಂಬಾ ಕಷ್ಟಪಟ್ಟು ಹಲವು ದಿನಗಳಿಂದ ಜೇನನ್ನು ಕೂಡಿಡುತ್ತಿತ್ತು. ಎಲ್ಲಿಂದಲೋ ಒಬ್ಬ ಮನುಷ್ಯನು ಬಂದು

ಜೇನುಗೂಡನ್ನು ಕಿತ್ತು ಜೇನುತುಪ್ಪವನ್ನು ಕುಡಿದುಬಿಟ್ಟನು.
ನೊಣಕ್ಕೆ ತನ್ನ ದೀರ್ಘಪ್ರಯತ್ನದ ಫಲವನ್ನು ಅನುಭವಿಸುವ
ವಿರಲಿಲ್ಲ. ಇದನ್ನು ನೋಡಿ ಅವಧೂತನು ಜೇನುನೊಣಕ್ಕೆ ನ
ಮಾಡುತ್ತ ಹೀಗೆಂದನು: "ಸ್ವಾಮಿ, ನೀನೇ ನನಗೆ ಗುರು.
ಸಿಟ್ಟ ಆಸ್ತಿ ನಿಜವಾಗಿ ಹೇಗೆ ಕೊನೆಗಾಣುವುದು ಎಂಬುದನ್ನು
ನಿನ್ನಿಂದ ಕಲಿತೆ."

೭. ಸಾವಿರಾರು ಜನ ಗುರುಗಳು ಸಿಕ್ಕುತ್ತಾರೆ.
ಶಿಷ್ಯನೊಬ್ಬ ಸಿಕ್ಕುವುದು ದುರ್ಲಭ ಎನ್ನುವುದು ಹಿಂದಿನ ನಾ
ಒಳ್ಳೆಯ ಬುದ್ಧಿವಾದವನ್ನು ಕೊಡುವವರು ಹಲವು ಮಂದಿ.
ಅದನ್ನು ಅನುಸರಿಸುವವರು ಅತಿ ವಿರಳ.

೮. ಒಬ್ಬನಿಗೆ ನಿಜವಾಗಿಯೂ ದೇವರ ಮೇಲೆ ಭಕ್ತಿ
ಪೂಜೆ ಜಪ ಧ್ಯಾನಗಳನ್ನು ಮಾಡಬೇಕೆಂಬ ಆಸೆಯಿದ್ದರೆ
ಅವನಿಗೆ ಬೇಕಾದ ಗುರುವನ್ನು ನಿಜವಾಗಿ ಒದಗಿಸಿಯೇ ಒದಗಿಸ
ಈ ವಿಚಾರದಲ್ಲಿ ಯಾವ ಚಿಂತೆಯನ್ನೂ ಮಾಡಬೇಕಾಗಿಲ್ಲ.

೯. ವೈದ್ಯರಲ್ಲಿ ಮೊದಲನೆಯವರು, ಎರಡನೆಯವರು
ಮೂರನೆಯವರು ಎಂದು ಮೂರು ವಿಧ. ಮೂರನೆ ತರ
ವೈದ್ಯ ರೋಗಿಯ ನಾಡಿಯನ್ನು ಪರೀಕ್ಷೆಮಾಡಿ ಯಾವುದ
ಔಷಧಿಯನ್ನಾದರೂ ತೆಗೆದುಕೊ ಎಂದು ಹೇಳುವನು.
ಅವನು ಹೊರಟು ಹೋಗುವನು. ರೋಗಿ ನಿಜವಾಗಿ ಔಷ
ತೆಗೆದುಕೊಂಡನೆ ಇಲ್ಲವೆ ಎನ್ನುವುದನ್ನು ವಿಚಾರಿಸುವುದಕ್ಕೂ
ವುದಿಲ್ಲ. ಎರಡನೆ ವಿಧದ ವೈದ್ಯ ಔಷಧವನ್ನು ಉಪಯೋ
ಗುಣಮುಖವಾಗುತ್ತೀಯೆ ಎಂದು ರೋಗಿಗೆ ಹೇಳಿ ತನ್ನ
ಒಳ್ಳೆಯ ಪ್ರಯತ್ನವನ್ನೆಲ್ಲ ಮಾಡಿ ಇಚ್ಛೆಯಿಲ್ಲದ ರೋಗಿ ಔಷ
ತೆಗೆದುಕೊಳ್ಳುವಂತೆ ಮಾಡಲು ಯತ್ನಿಸುವನು. ಮೊದಲನೆ
ರೋಗಿಯು ಯಾವ ಔಷಧವನ್ನೂ ತೆಗೆದುಕೊಳ್ಳುವುದಿಲ್ಲವೆಂ
ತೊಟ್ಟಿರುವಾಗ, ಅವನ ಎದೆಯ ಮೇಲೆ ಕಾಲಿಟ್ಟು ಔಷಧಿ
ಬಲವಂತದಿಂದ ರೋಗಿಗೆ ಕುಡಿಸುವುದಕ್ಕೂ ಹಿಂತೆಗೆಯು
ಇದರಂತೆಯೆ ಯಾವ ಗುರು ತನ್ನ ಶಿಷ್ಯನಿಗೆ ಉಪದೇಶ ಕೊಟ್ಟ
ಯಾವುದನ್ನೂ ವಿಚಾರಿಸುವುದಿಲ್ಲವೊ ಅವನು ಮೂರನೆ ಬಗೆಯ
ಶಿಷ್ಯನ ಮೇಲ್ಮೆಗಾಗಿ ಅವನಿಗೆ ತಿಳಿಯುವತನಕ ಪದೇ ಪದೇ

ುರು ಒತ್ತಿ ಹೇಳುವನೋ ಅವನು ಎರಡನೆಯ ವೈದ್ಯ. ಶಿಷ್ಯ ತಾನು ೇಳಿದುದನ್ನು ಚೆನ್ನಾಗಿ ಕೇಳುವುದಿಲ್ಲ ಮತ್ತು ಅನುಸರಿಸುವುದಿಲ್ಲ ಂಬುದನ್ನು ನೋಡಿ, ಬಲಾತ್ಕಾರದಿಂದ ಹೇಳಿದಂತೆ ಕೇಳುವಂತೆ ಾಡುವವನು ಮೊದಲನೆ ವಿಧದ ವೈದ್ಯ.

## ೭. ಸಾಕ್ಷಾತ್ಕಾರವೆ ಧರ್ಮ, ಚರ್ಚೆಯಲ್ಲ

೧. ಎಲ್ಲಿಯವರೆಗೆ ಒಬ್ಬನು ಶಾಸ್ತ್ರಗಳಲ್ಲಿರುವುದನ್ನು ಚರ್ಚಿಸ ಬೇಕು? ದೇವರನ್ನು ಕಾಣುವ ತನಕ. ಹೂವಿನ ಮೇಲೆ ಕುಳಿತು ಕೊಳ್ಳುವ ತನಕ ಜೇನುಹುಳು ಶಬ್ದ ಮಾಡುವುದು. ಮಕರಂದವನ್ನು ಹೀರಲು ಮೊದಲು ಮಾಡುತ್ತಲೆ ಅದರ ಶಬ್ದವೆಲ್ಲ ನಿಲ್ಲುವುದು.

೨. ಒಂದು ದಿನ ಗತಿಸಿದ ಮಾನ್ಯ ಕೇಶವಚಂದ್ರಸೇನನು ಶ್ರೀರಾಮಕೃಷ್ಣರನ್ನು ದಕ್ಷಿಣೇಶ್ವರ ದೇವಸ್ಥಾನದಲ್ಲಿ ಕಂಡು ಹೀಗೆ ಪ್ರಶ್ನೆಮಾಡಿದನು: "ಅನೇಕ ಪಂಡಿತರು ಬೇಕಾದಷ್ಟು ಶಾಸ್ತ್ರಗಳನ್ನು ಓದುತ್ತಾರೆ. ಆದರೂ ಅವರು ಆಧ್ಯಾತ್ಮಿಕ ವಿಚಾರದಲ್ಲಿ ಏನನ್ನೂ ತಿಳಿಯದವರು, ಇದಕ್ಕೆ ಕಾರಣವೇನು?" ಅದಕ್ಕೆ ಶ್ರೀರಾಮಕೃಷ್ಣರು ಈ ರೀತಿ ಹೇಳಿದರು: "ರಣಹದ್ದು ಆಕಾಶದ ಮೇಲೆ ಹಾರುತ್ತದೆ. ಆದರೆ ಅದರ ದೃಷ್ಟಿಯೆಲ್ಲಾ ಕೊಳೆತು ನಾರುವ ಕಳೇಬರಗಳು ಬಿದ್ದಿರುವ ಗುಂಡಿಯ ಕಡೆ. ಪಂಡಿತರೆಂದು ಜಂಭ ಕೊಚ್ಚಿಕೊಳ್ಳುವವರ ಮನ ಸ್ಸೆಲ್ಲ ಪ್ರಾಪಂಚಿಕ ವಸ್ತುಗಳಲ್ಲಿ ಆಸಕ್ತವಾಗಿರುವುದು. ಆದಕಾರಣವೆ ಅವರು ನಿಜವಾದ ಜ್ಞಾನವನ್ನು ಪಡೆಯಲಾರರು. ಬೇಕಾದಷ್ಟು ಧರ್ಮಗ್ರಂಥಗಳನ್ನು ಓದುವುದರಿಂದ ಅವರಿಗೆ ಏನು ಪ್ರಯೋಜನ ನಾಗುವುದು?"

೩. ಶ್ರೀರಾಮಕೃಷ್ಣರು ಗ್ರಂಥಗಳನ್ನೆಲ್ಲ ಅಷ್ಟು ಗ್ರಂಥಿಗಳೆಂದು ಹೇಳುತ್ತಿದ್ದರು. ಅಂದರೆ ವಿವೇಕ ಮತ್ತು ವೈರಾಗ್ಯವಿಲ್ಲದೆ ಸುಮ್ಮನೆ ಪುಸ್ತಕಗಳನ್ನು ಓದುವುದರಿಂದ ಒಬ್ಬರ ಅಹಂಕಾರ ಮತ್ತು ದರ್ಪವನ್ನು ಹೆಚ್ಚಿಸುವುದು. ಅದು ಒಬ್ಬನ ಮನಸ್ಸಿನಲ್ಲಿರುವ ಗ್ರಂಥಿಗಳನ್ನು ಇನ್ನೂ ಹೆಚ್ಚು ಮಾಡುವುದು.

೪. ಒಂದು ದಿನ ಶ್ರೀರಾಮಕೃಷ್ಣರು ಚರ್ಚೆಮಾಡುವುದರಲ್ಲಿ ಬಹಳ ಆಸಕ್ತನಾದವನಿಗೆ ಹೀಗೆ ಹೇಳಿದರು: "ಒಂದು ಮಾತಿನಿಂದ

ನಿನಗೆ ತೃಪ್ತಿ ಬೇಕಾದರೆ ನನ್ನಲ್ಲಿಗೆ ಬಾ. ಹೆಚ್ಚು ಕಾಲ
ಕೊನೆಗೆ ಸತ್ಯವನ್ನು ತಿಳಿದುಕೊಳ್ಳಬೇಕಾದರೆ ಕೇಶವಚ
ಹತ್ತಿರ ಹೋಗು.”

**೫.** ನೀರಿನ ಕೊಡ ತುಂಬುತ್ತಿರುವಾಗ ಅದರ ಧ
ವುದು. ಅದು ತುಂಬಿದ ತಕ್ಷಣವೆ ಧ್ವನಿ ನಿಲ್ಲುವುದು. ಇ
ಯಾರು ದೇವರನ್ನು ಕಂಡಿಲ್ಲವೊ ಅವರು ದೇವರ ವಿ
ಬೇಕಾದಷ್ಟು ವಾದ ಮಾಡುವರು. ಆದರೆ ಯಾರು
ನೋಡಿರುವರೋ ಅವರು ಮೌನವಾಗಿ ಆ ಪರಮಾ
ಅನುಭವಿಸುವರು.

**೬.** ವಿವೇಕ ವೈರಾಗ್ಯಗಳಿಲ್ಲದೆ ಸುಮ್ಮನೆ ಶಾಸ್ತ್ರಗ
ಪ್ರಯೋಜನವಿಲ್ಲ. ಇವುಗಳಿಲ್ಲದೆ ನಾವು ಮುಂದುವರಿಯ
ವಿವೇಕವೆಂದರೆ ನಿತ್ಯ ಅನಿತ್ಯ ವಸ್ತುವನ್ನು ವಿಮರ್ಶಿಸಿ ನಿತ್ಯವ
ಹಿಡಿಯುವುದು. ಆತ್ಮ ದೇಹೇಂದ್ರಿಯಗಳಿಗಿಂತ ಬೇರಾದವ
ಜ್ಞಾನವೂ ಕೂಡ ವಿವೇಕ. ಪ್ರಾಪಂಚಿಕ ವಸ್ತುಗಳ ಮೇ
ಅನಾಸಕ್ತಿಯೇ ವೈರಾಗ್ಯ.

**೭.** ಹಿಂದೂಗಳ ಪಂಚಾಂಗದಲ್ಲಿ ಇಪ್ಪತ್ತು ಕೊ
ಬರುತ್ತದೆ ಎಂದು ಬರೆದಿರುತ್ತದೆ. ಇಷ್ಟೊಂದು ಮಳೆ
ಎಂದು ಹೇಳಿರುವ ಪಂಚಾಂಗವನ್ನು ಹಿಂಡಿದರೆ ಒಂದು
ನೀರೂ ಬರುವುದಿಲ್ಲ. ಇದರಂತೆ ಶಾಸ್ತ್ರದಲ್ಲಿ ಎಷ್ಟೊ ಒಳ್ಳೆ
ವಾದಗಳು ಇರುತ್ತವೆ. ಆದರೆ ಸುಮ್ಮನೆ ಇವನ್ನು ಓದ
ಒಬ್ಬನು ಒಳ್ಳೆಯವನಾಗಲಾರ. ಅವುಗಳಲ್ಲಿ ಹೇಳಿರುವಂ
ಮಾಡಬೇಕು.

**೮.** ಇಬ್ಬರು ಒಂದು ತೋಟಕ್ಕೆ ಹೋದರು. ಅವರ
(ಪ್ರಾಪಂಚಿಕ ವಸ್ತುವಿನಲ್ಲಿ ಆಸಕ್ತನಾದವನು) ತೋಟದ
ಪ್ರವೇಶಿಸಿದ ಕೂಡಲೇ, ಅಲ್ಲಿ ಎಷ್ಟು ಮಾವಿನ ಮರಗಳ
ಯೊಂದು ಮರದಲ್ಲಿಯೂ ಎಷ್ಟು ಹಣ್ಣುಗಳಿವೆ, ಈ ತೋ
ಖರೀದಿ ಎಷ್ಟಾಗಬಹುದು ಎಂಬುದನ್ನು ಲೆಕ್ಕಾಚಾರ ಹಾ
ಮೊದಲು ಮಾಡಿದನು. ಇವನೊಂದಿಗೆ ಬಂದ ಸ್ನೇಹಿತನು
ಮಾಲೀಕನ ಹತ್ತಿರ ಹೋಗಿ ಅವನ ಪರಿಚಯ ಮಾಡಿಕೊಂ
ಅಪ್ಪಣೆ ಪಡೆದು ಸುಮ್ಮನೆ ಮಾವಿನ ಗಿಡದ ಹತ್ತಿರ ಹೋಗಿ

ಕಿತ್ತು ತಿನ್ನಲು ಮೊದಲು ಮಾಡಿದನು. ಈಗ ಇವರಿಬ್ಬರಲ್ಲಿ ಯಾರು ಬುದ್ಧಿವಂತರು? ಮಾವಿನ ಹಣ್ಣನ್ನು ತಿನ್ನಿ, ಅದು ನಿಮ್ಮ ಹಸಿವನ್ನು ಅಡಗಿಸುವುದು. ಮರದ ಎಲೆಯನ್ನು ಎಣಿಸಿ ಕೆಲಸಕ್ಕೆ ಬಾರದ ಲೆಕ್ಕಾಚಾರ ಹಾಕುವುದರಿಂದ ಪ್ರಯೋಜನವೇನು? ಪಾಂಡಿತ್ಯದಿಂದ ಮೆರೆಯುವವನು ದೇವರ ವಿಚಾರವಾಗಿ ಕೆಲಸಕ್ಕೆ ಬಾರದ ಹಲವು ಚರ್ಚೆಗಳಲ್ಲಿ ನಿರತನಾಗಿರುವನು. ಆದರೆ ಶ್ರದ್ಧಾವಿನಯದಿಂದ ಕೂಡಿದ ಭಕ್ತ ದೇವರ ಅನುಗ್ರಹದಿಂದ ಸಚ್ಚಿದಾನಂದವನ್ನು ಜಗದಲ್ಲಿ ಅನುಭವಿಸುವನು.

೯. ಸಂತೆಯಿಂದ ದೂರ ಇರುವ ವರೆಗೆ ಒಬ್ಬನಿಗೆ "ಹೊ, ಹೊ!" ಎಂಬ ಅಸ್ಪಷ್ಟ ಧ್ವನಿಯೊಂದೆ ಕೇಳುವುದು. ಆದರೆ ಸಂತೆಯನ್ನು ಒಳಹೊಕ್ಕಾಗ ಶಬ್ದ ಸ್ಪಷ್ಟವಾಗುವುದು. ಆಗ ಒಬ್ಬನು ಚೌಕಾಶಿ ಮಾಡುತ್ತಿರುವುದು, ಮತ್ತೊಬ್ಬರು ಕೊಳ್ಳುತ್ತಿರುವುದು ಇವನ್ನು ಅವನು ನೋಡುತ್ತಾನೆ. ಇದರಂತೆಯೇ ಧಾರ್ಮಿಕ ಪ್ರಪಂಚದಿಂದ ದೂರ ಇರುವ ವರೆಗೆ ಒಬ್ಬನಿಗೆ ಧರ್ಮದ ಸಾರ ಗೊತ್ತಾಗುವುದಿಲ್ಲ.

೧೦. ವೇದ ಪುರಾಣ ಮತ್ತು ಇನ್ನೂ ಇತರ ಧರ್ಮಗ್ರಂಥಗಳೆಲ್ಲ, ಮಾನವನ ಬಾಯಿಂದ ಬಂದುದರಿಂದ ಎಂಜಲಾಗಿದೆ. ಒಂದು ಮಾತ್ರ ಬಂದಿಲ್ಲ. ಅದೇ ಬ್ರಹ್ಮ ಅಥವಾ ಅದ್ವಿತೀಯ ವಸ್ತು. ಏಕೆಂದರೆ ಅದನ್ನು ಇದುವರಿಗೆ ಯಾರಿಗೂ ಹೇಗಿದೆ ಎಂದು ವರ್ಣಿಸುವುದಕ್ಕೇ ಸಾಧ್ಯವಾಗಿಲ್ಲ.

೧೧. ಪ್ರಾಪಂಚಿಕ ಮನುಷ್ಯನಿಗೆ ಪರಮಾತ್ಮನ ಧ್ಯಾನದಿಂದ ಬರುವ ಅತ್ಯಾನಂದವನ್ನು ವರ್ಣಿಸುವುದು ಏನೂ ಅರಿಯದ ಮಗುವಿಗೆ ದಾಂಪತ್ಯ ಸುಖವನ್ನು ವರ್ಣಿಸುವಷ್ಟೇ ಕಷ್ಟವಾಗಿದೆ.

೧೨. ಸ ರಿ ಗ ಮ ಪ ದ ನಿ, ಎಂದು ಬಾಯಿಯಲ್ಲಿ ಹೇಳುವುದು ಸುಲಭ. ಆದರೆ ಅದನ್ನು ವಾದ್ಯದ ಮೇಲೆ ಬಾರಿಸುವುದು ಕಷ್ಟ. ಇದರಂತೆಯೇ ಧಾರ್ಮಿಕ ವಿಚಾರವಾಗಿ ಮಾತನಾಡುವುದು ಸುಲಭ. ಆದರೆ ಅದನ್ನು ಅಭ್ಯಾಸ ಮಾಡುವುದು ಕಷ್ಟ.

೧೩. ಒಂದು ದಿನ ರಾಮಚಂದ್ರನೆಂಬ ಬ್ರಹ್ಮಚಾರಿ ದಕ್ಷಿಣೇಶ್ವರದಲ್ಲಿ ಶ್ರೀ ರಾಮಕೃಷ್ಣರನ್ನು ಕಂಡನು. ಆತನು ಸನ್ಯಾಸಿಗಳಂತೆ ತನ್ನ ಜಟೆಯನ್ನು ಬೆಳೆಸಿದ್ದನು. ಶ್ರೀರಾಮಕೃಷ್ಣರ ಮುಂದೆ ಕುಳಿತ ಮೇಲೆ 'ಶಿವೋಹಂ' ಎನ್ನುತ್ತಾ ಮತ್ತೇನನ್ನೂ ಮಾತನಾಡುತ್ತಿರಲಿಲ್ಲ. ಶ್ರೀರಾಮಕೃಷ್ಣರು ಮೌನವಾಗಿ ಕೊಂಚಕಾಲ ಅವನನ್ನು ಪರೀಕ್ಷಿಸಿ,

"ಸುಮ್ಮನೆ ಶಿವೋಹಂ ಎಂದು ಹೇಳುವುದರಿಂದ ಪ್ರಯೋಜನವೆ
ಒಬ್ಬನು ತನ್ನ ಅಂತರಂಗದಲ್ಲಿಯೇ ಇರುವ ಪರಮಾತ್ಮನ ಧ್ಯಾ
ನಿರತನಾಗಿ ತಾನೆಂಬುದನ್ನೆಲ್ಲ ಮರೆತು ಆತನಲ್ಲಿ ಐಕ್ಯನಾದ
ಮಾತ್ರ ಆ ಪವಿತ್ರ ಮಂತ್ರವನ್ನು ಉಚ್ಚರಿಸುವುದಕ್ಕೆ ಯೋಗ್ಯನ
ತ್ತಾನೆ. ಸಾಕ್ಷಾತ್ಕಾರವಿಲ್ಲದೆ ಸುಮ್ಮನೆ ಪದವನ್ನು ಉಚ್ಚರಿಸ
ರಿಂದ ಪ್ರಯೋಜನವೇನು? ಅಂತಹ ಸಾಕ್ಷಾತ್ಕಾರ ಸಿದ್ಧಿಸುವ ತ
ದೇವರನ್ನು ಸ್ವಾಮಿ ಎಂದೂ, ನಾವು ಆತನ ದಾಸರೆಂದೂ ತಿಳಿ
ವುದು ಒಳ್ಳೆಯದು" ಎಂದರು. ಬ್ರಹ್ಮಚಾರಿಗೆ ತನ್ನ ತಪ್ಪು ಗೊತ
ಈ ಬುದ್ಧಿವಾದ ಮತ್ತು ಇನ್ನೂ ಇತರ ಬೋಧನೆಗಳನ್ನು ಕೇಳಿ ಬ
ವಂತನಾದನು. ಅವನು ಕೋಣೆಯನ್ನು ಬಿಡುವುದಕ್ಕೆ ಮು
ಶ್ರೀರಾಮಕೃಷ್ಣರ ಕೋಣೆಯ ಗೋಡೆಯ ಮೇಲೆ ಹೀಗೆ ಬರೆದ
ಪರಮಹಂಸರಿಂದ ಕಲಿತ ಬುದ್ಧಿವಾದ: "ಇಂದಿನಿಂದ ಬ್ರಹ್ಮಚಾರಿ ರ
ಚಂದ್ರ ದೇವರನ್ನು ಸ್ವಾಮಿಯೆಂದೂ ತಾನು ಅವನ ಸೇವಕನೆಂ
ತಿಳಿಯುತ್ತಾನೆ."

## ೮. ಗೃಹಸ್ಥರಿಗೆ ತಕ್ಕ ಸಾಧನ

೧. ಕಣ್ಣಾಮುಚ್ಚಾಲೆ ಆಟದಲ್ಲಿ ಆಡುವವನು ಅಜ್ಜಿಯ
ಮುಟ್ಟಿದ ಮೇಲೆ ಅವನು ಇನ್ನು ಆಟದಲ್ಲಿ ಭಾಗವಹಿಸಲಾರ. ಅವ
ತನ್ನ ಇಚ್ಛೆ ಬಂದ ಕಡೆಗೆ ಹೋಗಬಹುದು. ಯಾರೂ ಅವನ
ಕಳ್ಳನೆಂದು ತಿಳಿದು ಅಟ್ಟಿಸಿಕೊಂಡು ಬರುವುದಿಲ್ಲ. ಇದರಂತೆ
ಪ್ರಪಂಚದ ಆಟದ ಮೈದಾನದಲ್ಲಿ ಯಾರು ದೇವರ ಪಾದಪದ್ಮಗಳ
ಮುಟ್ಟುತ್ತಾರೆಯೋ ಅವರು ಬಂಧನದಿಂದ ಮುಕ್ತರಾಗುವರು. ದ
ರಲ್ಲಿ ಯಾರು ಆಶ್ರಯವನ್ನು ಪಡೆಯುತ್ತಾರೆಯೊ ಅವರನ್ನು ಸಂಸಾ
ಬಂಧನಗಳು ಕಟ್ಟಲಾರವು.

೨. ಹಳ್ಳಿಯ ಕಡೆ ಗದ್ದೆ ಮತ್ತು ನೀರು ಹರಿಯುವ ಕೆಲ
ಮೀನನ್ನು ಹಿಡಿಯುವುದಕ್ಕೆ ಬಲೆಯನ್ನು ಹಾಕುವರು. ಬೊಂ
ಕಡ್ಡಿಗಳ ಮಧ್ಯೆ ನೀರು ಹರಿಯುತ್ತ ಹೋಗುವುದನ್ನು ನೋಡಿ ಮೀ
ಅಲ್ಲಿಗೆ ಅತ್ಯಂತ ಸಂತೋಷದಿಂದ ಹೋಗುವುದು. ಆದರೆ ಒ
ಪ್ರವೇಶಿಸಿದರೆ ಪುನಃ ಬರಲಾರವು. ಅವುಗಳು ಬಲೆಯಲ್ಲಿ ಬಿದ್ದು ಶೀ

ತಮ್ಮ ಪ್ರಾಣವನ್ನೇ ಕಳೆದುಕೊಳ್ಳುವುವು. ಆದರೆ ಮತ್ತೊಂದರ
ಭವದಿಂದ ಬುದ್ಧಿ ಕಲಿತ ಒಂದೆರಡು ಮೀನುಗಳು ಮಾತ್ರ
ತ್ತೊಂದು ಕಡೆಗೆ ಧುಮುಕಿ ತಪ್ಪಿಸಿಕೊಳ್ಳುತ್ತವೆ. ಇದರಂತೆಯೆ
ಥರು ಮೋಸದ ಬೆಳಕಿಗೆ ಮರುಳಾಗಿ ಪ್ರಪಂಚವನ್ನು ಪ್ರವೇಶಿ
ರು. ಆದರೆ ಕೊನೆಗೆ ಪ್ರಪಂಚದ ಮಾಯೆಯಲ್ಲಿ ಸಿಕ್ಕಿಬೀಳು
ಹಲವಾರು ಕಷ್ಟವನ್ನು ಅನುಭವಿಸಿ ಕೊನೆಗೆ ನಾಶವಾಗುವರು.
ರು ಮತ್ತೊಬ್ಬರ ಅನುಭವದಿಂದ ಬುದ್ಧಿ ಕಲಿತು ಕಾಮಕಾಂಚನ
ಬೀಳದೆ ದೇವರಲ್ಲಿ ಶರಣಾಗತರಾಗುತ್ತಾರೆಯೊ ಅವರೇ ನಿಜವಾದ
ದವನ್ನು ಅನುಭವಿಸುವವರು.

೩. ಭಕ್ತ ರಾಮಪ್ರಸಾದ ಈ ಪ್ರಪಂಚವನ್ನು ಒಂದು ಕನ
ು ಕರೆದನು. ಆದರೆ ಒಮ್ಮೆ ದೇವರ ಮೇಲೆ ಭಕ್ತಿ ಹುಟ್ಟಿತೆಂದರೆ
ಪ್ರಪಂಚವೆ,

"—ಆನಂದದ ನೆಲೆವೀಡು
ತಿಂದು ಕುಡಿದು ನಲಿನಲಿಯುತ ಕಾಲಕಳೆವೆ.
ಎನಿತಮೋಘ ಜನಕರಾಜನಾ ತಪಃಪ್ರಭೆ!
ಆವ ಸುಖಕೆ ಕೊರತೆ ಇತ್ತು ಅವಗೆ ಇಲ್ಲಿ?"

ಇಲ್ಲ! ಅವನು ಎರಡನ್ನೂ (ದೇವರು ಮತ್ತು ಪ್ರಪಂಚ)
ದೃಷ್ಟಿಯಿಂದ ನೋಡುತ್ತಿದ್ದನು. ಅವನು ತನ್ನ ಮನಸ್ಸನ್ನೇ ನೊ
ರಿಗೆ ಅರ್ಪಿಸಿದ್ದನು. ಆದರೂ ಏಕಕಾಲದಲ್ಲಿ ಅವನು ಬಟ್ಟಲಿನ
ನ್ನು ಕುಡಿದನು.

೪. ಒಂದು ದಿನ ಒಬ್ಬನು, ಗೃಹಸ್ಥರು ದೈವಭಕ್ತರಾಗುವುದಕ್ಕೆ
ವೆ ಎಂದು ಕೇಳಿದನು. ಶ್ರೀರಾಮಕೃಷ್ಣರು ಮಂದಹಾಸದಿಂದ
ಹೇಳಿದರು—"ನಾನು ಹುಟ್ಟಿದ ಹಳ್ಳಿಯ ಹತ್ತಿರ ಹೆಂಗಸರು
ಲಕ್ಕಿ ಕುಟ್ಟುತ್ತಿರುವುದನ್ನು ನೋಡಿರುವೆ. ಒಂದು ಕೈಯಿಂದ
ನಲ್ಲಿರುವ ಅವಲಕ್ಕಿಯನ್ನು ಆಡಿಸುವಳು. ಮತ್ತೊಂದು
ಂದ ಮಗುವನ್ನು ಹಿಡಿದುಕೊಂಡು ಅದಕ್ಕೆ ಎದೆಹಾಲನ್ನು
ಸುವಳು. ಅದೇ ಕಾಲದಲ್ಲಿ ಬಂದವರ ಹತ್ತಿರ ನಿನ್ನ ಹಿಂದಿನ
ಇಷ್ಟು, ಇವತ್ತಿನ ಬಾಕಿ ಇಷ್ಟು ಎಂದು ವ್ಯಾಪಾರ ಮಾಡುವಳು.
ರು ಮಾಡುವ ಕೆಲಸ ಅಷ್ಟೊಂದಿದ್ದರೂ ಕುಟ್ಟುವ ಯಂತ್ರ ತನ್ನ
ೕಲೆ ಬಿದ್ದು ಗಾಯಮಾಡದೆ ಇರಲಿ ಎಂದು ಯಾವಾಗಲೂ ತನ್ನ

ಮನಸ್ಸನ್ನು ಅದರ ಮೇಲೆ ಇಟ್ಟಿರುವಳು. ಪ್ರಪಂಚದಲ್ಲಿರಿ.
ಯಾವಾಗಲೂ ಅವನನ್ನು ನೆನೆಯಿರಿ. ಅವನಿಂದ ದೂರವ
ನೀವು ಹಾಳಾದಂತೆ."

೫. ಯಾವನು ಪ್ರಪಂಚದ ಪ್ರಲೋಭನಗಳ ಮಧ್ಯದ
ಭಗವತ್ ಭಕ್ತಿಯಿಂದ ತನ್ನ ಮನಸ್ಸನ್ನು ಏಕಾಗ್ರಗೊಳಿಸಬಲ್ಲ
ಅವನೇ ನಿಜವಾದ ವೀರ. ನಿಜವಾದ ಶೂರ ತಲೆಯ ಮೇಲೆ
ವನ್ನು ಹೊತ್ತುಕೊಂಡು ಹೋಗುತ್ತಿರುವಾಗ ಯಾವ ದಿಕ್ಕಿ
ಬೇಕಾದರೆ ಆ ದಿಕ್ಕಿನಲ್ಲಿ ತಿರುಗಿ ನೋಡಬಲ್ಲ. ಇದರಂತೆ
ಇಂದ್ರಿಯವನ್ನು ನಿಗ್ರಹಿಸಿದ ಜ್ಞಾನಿ ಸಂಸಾರ ತಾಪತ್ರಯಗಳ
ದಿಂದ ಕುಗ್ಗಿಹೋಗಿದ್ದರೂ, ಅವನ ಮನಸ್ಸು ಯಾವಾಗಲೂ ದೆ
ಕಡೆಗೆ ತಿರುಗಿರುವುದು.

೬. ಉತ್ತರ ಇಂಡಿಯಾ ದೇಶದಲ್ಲಿ ತಲೆಯ ಮೇಲೆ ಹೆಂಗ
ಒಂದರ ಮೇಲೊಂದು ನಾಲ್ಕೈದು ನೀರಿನ ಕೊಡವನ್ನು ಇಟ್ಟು ಹೊ
ಕೊಂಡು ಹೋಗುತ್ತಿರುವಾಗ ಸ್ನೇಹಿತರೊಂದಿಗೆ ತಮ್ಮ ಸುಖದುಃ
ಕಥೆಗಳನ್ನು ಮಾತನಾಡಿಕೊಂಡು ಹೋಗುತ್ತಾ ಕೆಳಗೆ ಕೊಡ
ದಿರಲಿ ಎಂದು ಅದರ ಮೇಲೆ ಮನಸ್ಸನ್ನು ಇಡುವಂತೆ, ಧರ್ಮ
ದಲ್ಲಿ ನಡೆಯುವ ದಾರಿಗನು ಎಂತಹ ಸನ್ನಿವೇಶದಲ್ಲಿಯೂ ತನ್ನ
ವಾದ ಗುರಿಯನ್ನು ಬಿಟ್ಟುಹೋಗದಂತೆ ಜೋಪಾನವಾಗಿರಬೇ

೭. ಬೀದಿಯಲ್ಲಿ ಹಾಡುತ್ತ ಹೋಗುವವನು ಏಕಕಾಲ
ಎರಡು ವಾದ್ಯಗಳನ್ನು ಬಾರಿಸುವಂತೆ ಎಲೈ ಗೃಹಸ್ಥರೆ ನಿಮ್ಮ ಎ
ಕೈಗಳಿಂದಲೂ ಪ್ರಪಂಚದ ಕೆಲಸಗಳನ್ನು ಮಾಡಿ. ಆದರೆ ಅನವರ
ಭಗವನ್ನಾಮಸ್ಮರಣೆಯನ್ನು ಮರೆಯಬೇಡಿ.

೮. ಜಾರೆ ಮನೆಯಲ್ಲಿ ಕೆಲಸಮಾಡುತ್ತಿರುವಾಗ ತನ್ನ
ಪತಿ ಯಾವ ಸಮಯಕ್ಕೆ ಬರುತ್ತಾನೆ ಎಂಬುದನ್ನೇ ನೆನೆಯು
ಎಲೈ ಗೃಹಸ್ಥರೆ, ನೀವು ನಿಮ್ಮ ಪ್ರಾಪಂಚಿಕ ಕೆಲಸಗಳನ್ನು ಮ
ಆದರೆ ನಿಮ್ಮ ಮನಸ್ಸನ್ನು ಯಾವಾಗಲೂ ದೇವರ ಮೇಲೆ

೯. ಪ್ರಪಂಚದಲ್ಲಿ ಹೇಗೆ ಅನಾಸಕ್ತನಾಗಿರುವುದು ನಿ
ಗೊತ್ತೆ? ಒಬ್ಬನು ಕೆಸರಿನಲ್ಲಿರುವ ಮೀನಿನಂತೆ ಇರಬೇಕು. ಮೀ
ಕೆಸರಿನಲ್ಲಿ ಇರುವುದು. ಆದರೆ ಕೆಸರಿನಿಂದ ಮೀನು ಕೆ
ಯಾಗುವುದಿಲ್ಲ.

೧೦. ತಕ್ಕಡಿಯಲ್ಲಿ ತೂಕವಾಗಿರುವುದು ಕೆಳಗೆ ಇರುವುದು. ೂಕವಿಲ್ಲದೆ ಇರುವುದು ಮೇಲೆ ಹೋಗುವುದು. ಮಾನವನ ನಸ್ಸು ತಕ್ಕಡಿಯಂತೆ, ಎರಡು ತೂಕಗಳ ಪ್ರಭಾವಕ್ಕೆ ಒಳ ಟ್ಟಿರುವುದು. ಒಂದನೆಯದು ಪ್ರಪಂಚ ಮತ್ತು ಅದರ ಕೀರ್ತಿ ುಂತಾದುವನ್ನು ಅನುಭವಿಸಬೇಕೆಂಬ ಆಸೆ. ಎರಡನೆಯದು ವೇಕ, ವೈರಾಗ್ಯ ಮತ್ತು ಭಗವದ್ಭಕ್ತಿ. ಮೊದಲನೆಯದು ಚ್ಚಾಗಿದ್ದರೆ ಮನಸ್ಸು ಪ್ರಪಂಚದ ಕಡೆಗೆ ವಾಲಿ ದೇವರಿಂದ ದೂರ ೋಗುವುದು. ಎರಡನೆಯದು ಹೆಚ್ಚಾಗಿದ್ದರೆ ಮನಸ್ಸು ದೇವರ ಡೆಗೆ ವಾಲಿ ಪ್ರಪಂಚದಿಂದ ದೂರವಾಗುವುದು.

೧೧. ಒಬ್ಬ ರೈತ ಕಬ್ಬಿನ ಗದ್ದೆಗೆ ದಿನವೆಲ್ಲ ನೀರನ್ನು ಹಾಯಿ ತ್ತಿದ್ದನು. ತನ್ನ ಕೆಲಸವೆಲ್ಲ ಪೂರೈಸಿದ ಮೇಲೆ ಗದ್ದೆಯಲ್ಲಿ ಒಂದು ೊಟ್ಟು ನೀರು ಕೂಡ ಇಲ್ಲದೆ ಇರುವುದನ್ನು ಕಂಡನು. ದೂರ ಲ್ಲಿದ್ದ ಹೆಗ್ಗಣದ ಬಿಲದ ಮೂಲಕವಾಗಿ ನೀರೆಲ್ಲ ಹರಿದು ಹೋಗಿತ್ತು. ೇವರ ಆರಾಧನೆಯೊಂದಿಗೆ ಧನ, ಕೀರ್ತಿ ಮುಂತಾದ ಬಯಕೆಗಳನ್ನು ಶಿಸುವ ಭಕ್ತನ ಸ್ಥಿತಿಯೂ ಅಷ್ಟೆ. ಅವನು ಪ್ರತಿದಿನ ಪ್ರಾರ್ಥಿ ದರೂ ಕೊನೆಗೆ ಸ್ವಲ್ಪವೂ ಮುಂದುವರಿದಿರುವುದಿಲ್ಲ. ಅವನ ಭಕ್ತಿ ೆಲ್ಲ ಆಸೆ ಎಂಬ ಬಿಲದ ಮೂಲಕವಾಗಿ ಹರಿದು ವ್ಯರ್ಥವಾಗಿರುವುದು ೂತ್ತಾಗುವುದು.

೧೨. ಕಂಬವನ್ನು ಹಿಡಿದುಕೊಂಡು ಸುತ್ತಲೂ ಹುಡುಗನು ೇಗವಾಗಿ ಸುತ್ತುತ್ತಾನೆ. ಸುತ್ತುವಾಗ ಅವನ ಗುರಿಯೆಲ್ಲ ಕಂಬದ ೕಲೆ ಇದೆ. ಕಂಬವನ್ನು ಅವನು ಎಲ್ಲಿಯವರೆಗೆ ಭದ್ರವಾಗಿ ಹಿಡಿದು ೊಂಡಿರುವನೊ ಅಲ್ಲಿಯವರೆಗೂ ಅವನು ಬೀಳುವುದಿಲ್ಲವೆಂದೂ, ವನು ಕಂಬವನ್ನು ಬಿಟ್ಟ ತಕ್ಷಣವೇ ತಾನು ಬಿದ್ದುಬಿಡುವನೆಂದೂ ವನಿಗೆ ಚೆನ್ನಾಗಿ ಗೊತ್ತಿದೆ. ಅದರಂತೆಯೇ ಮನಸ್ಸನ್ನು ದೇವರ ೕಲೆ ಯಾವಾಗಲೂ ನಿಲ್ಲಿಸಿ, ನಿಮ್ಮ ಪ್ರಪಂಚದ ಕೆಲಸಗಳನ್ನು ಾಡಿದರೆ ಎಲ್ಲಾ ಅಪಾಯಗಳಿಂದಲೂ ಪಾರಾಗುವಿರಿ.

೧೩. ಅನೇಕರು ಪ್ರಪಂಚದಲ್ಲಿ ತಮ್ಮ ಸುಖ ಹೆಚ್ಚುವುದೆಂದು ಳಿದು ವ್ರತಾದಿಗಳನ್ನು ಮಾಡುತ್ತಾರೆ. ಆದರೆ ದುರದೃಷ್ಟವಶದಿಂದ ವರು ಏನಾದರೂ ಕಷ್ಟಕ್ಕೆ ಒಳಗಾದಾಗ, ಅಥವಾ ಸಾಯುವ ಾಲದಲ್ಲಿ ದೇವರನ್ನು ಮರೆಯುವರು. ಸಾಧಾರಣ ದಿನಗಳಲ್ಲಿ ಅರಗಿಣಿ

ರಾಧಾರಮಣನ ಹೆಸರನ್ನು ದಿನವೆಲ್ಲ ಹಾಡುವುದು. ಆದರೆ
ಬೆಕ್ಕಿನ ಕೈಗೆ ಸಿಕ್ಕಿಕೊಂಡಾಗ ರಾಧಾರಮಣನ ಹೆಸರನ್ನು ವ
ತನ್ನ ನೈಜಧ್ವನಿಯಿಂದ ಕೀರ್, ಕೀರ್ ಎಂದು ಕಿರಿಚಿಕೊಳ್ಳು

೧೪. ದೋಣಿ ನೀರಿನಲ್ಲಿದ್ದರೆ ಅಪಾಯವಿಲ್ಲ. ಆದರೆ
ದೋಣಿಯೊಳಗೆ ಬರದಂತೆ ಮಾಡಬೇಕು. ನೀರು ಬಂದರೆ ದ
ಮುಳುಗುವುದು. ಇದರಂತೆಯೆ ಭಕ್ತನು ಗೃಹಸ್ಥನಂತೆ ಪ್ರಪಂ
ಇದ್ದರೆ ತೊಂದರೆ ಇಲ್ಲ. ಆದರೆ ಪ್ರಾಪಂಚಿಕತೆ ಅವನ ಮನಸ
ಪ್ರವೇಶಿಸಕೂಡದು.

೧೫. ಪ್ರಪಂಚ ಹೇಗಿದೆ ಬಲ್ಲಿರಾ? ಇದು ಬರೀ ಬೀಜ ವ
ಸಿಪ್ಪೆಯಿಂದ ಕೂಡಿದ ಒಂದು ಬಗೆಯ ಹಣ್ಣಿನಂತೆ ಇದೆ. ತಿ
ಇರುವುದು ಎಲ್ಲೋ ಸ್ವಲ್ಪ. ಇದನ್ನು ತಿಂದರೆ ಹೊಟ್ಟೆನೊ
ಬರುವುದು.

೧೬. ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣನ್ನು ಬಿಚ್ಚಿ
ಕೈಗೆ ಅಂಟುವುದಿಲ್ಲ. ಅದರಂತೆಯೆ ನೀವು ಮೊದಲು ಭಕ್ತಿ
ಎಣ್ಣೆಯನ್ನು ಸವರಿಕೊಂಡರೆ ಪ್ರಪಂಚದಲ್ಲಿ ಕಾಮಕಾಂಚನ ಪಾ
ಬೀಳದೆ ಇರಬಹುದು.

೧೭. ಹಾವು ತನ್ನನ್ನು ಹಿಡಿಯಲು ಬರುವವರನ್ನು ಕಚ್ಚು
ಆದರೆ ಯಾರಿಗೆ ಗಾರುಡಿಗ ವಿದ್ಯೆ ಗೊತ್ತಿದೆಯೊ ಅವರು ನಿರ್ಭಯ
ಏಳೆಂಟು ಹಾವನ್ನು ತಮ್ಮ ಕೊರಳಿನ ಸುತ್ತಲೂ ನೇತುಹಾಕಿಕೊ
ಅವುಗಳಿಂದ ಬೇಕಾದಷ್ಟು ಆಟವಾಡಿಸುವರು. ಇದರಂತೆಯೇ ಯ
ವಿವೇಕ ಮತ್ತು ವೈರಾಗ್ಯವನ್ನು ಹೊಂದಿದ ಮೇಲೆ ಪ್ರಪಂಚ
ಜೀವಿಸುತ್ತಾರೆಯೊ ಅವರು ಪ್ರಪಂಚದ ವಿಷಯಗಳಿಂದ ಕೆಡುವು
ವಿವೇಕ ಮತ್ತು ವೈರಾಗ್ಯ ಎಂಬಿವು ಹಾವಾಡಿಸುವವನನ್ನು ಕಾಪಾ
ಮಂತ್ರದ ಮಣ್ಣಿನಂತೆ.

೧೮. ಮೂಲಂಗಿಯನ್ನು ತಿಂದರೆ ಅದು ತೇಗಿನಿಂದ ಗೊತ್ತಾ
ವಂತೆ ಒಬ್ಬನ ಆಲೋಚನೆ ಅವನ ಮಾತಿನಿಂದ ಗೊತ್ತಾಗುವು
ಪ್ರಪಂಚದಲ್ಲಿ ಮಗ್ನರಾದವರು ಮಹಾಪುರುಷರನ್ನು ನೋಡುವು
ಬಂದರೂ ಅಲ್ಲಿಯೂ ಪ್ರಾಪಂಚಿಕ ವಿಷಯವನ್ನೇ ಮಾತನಾಡುವ

೧೯. ಮನಸ್ಸೇ ಎಲ್ಲಕ್ಕೂ ಮೂಲ ಎಂಬುದನ್ನು ತಿ
ಕೊಳ್ಳಿ. ಒಬ್ಬನನ್ನು ಬುದ್ಧಿವಂತನನ್ನಾಗಿ ಅಥವಾ ದಡ್ಡನನ

ಾಡುವುದು, ಬಂಧನದಲ್ಲಿ ನರಳುವಂತೆ ಮಾಡುವುದು ಅಥವಾ
ುರಾತ್ಮನನ್ನಾಗಿ ಮಾಡುವುದು, ಎಲ್ಲಾ ಮನಸ್ಸು. ಯಾರ ಮನಸ್ಸು
ದಾ ಭಗವಂತನ ಮೇಲೆ ನೆಲೆಸಿರುವುದೊ ಅವನಿಗೆ ಇನ್ನು ಯಾವ
ಾಧನೆಯೂ ಬೇಕಿಲ್ಲ.

೨೦. ಬ್ರಹ್ಮಜ್ಞಾನವನ್ನು ಪಡೆದವನ ಸ್ವಭಾವ ನಿನಗೆ ಗೊತ್ತೆ?
ವನು ಸರ್ವಾಂತರ್ಯಾಮಿಯನ್ನು ಒಳಗೆ ಮತ್ತು ಹೊರಗೆ ನೋಡು
ತ್ತಾನೆ. ಗಾಜಿನ ಬಾಗಿಲಿರುವ ಒಂದು ಕೋಣೆಯೊಳಗೆ ಇದ್ದಂತೆ
ರುವನು.

೨೧. ಭಗವದ್ಗೀತೆಯನ್ನು ಪೂರ್ತಿ ಹನ್ನೆರಡು ಸಲ ಓದಿದುದರ
ಪ್ರತಿಫಲ ಗೀತೆಯನ್ನು ಹನ್ನೆರಡು ಸಲ ಉಚ್ಚರಿಸಿದಷ್ಟೆ. ಗೀತೆಯನ್ನು
ನ್ನೆರಡು ಸಲ ಹೇಳಿರಿ, ಅದು ತ್ಯಾಗಿ ತ್ಯಾಗಿ ಎಂದು ಆಗುತ್ತದೆ. ಗೀತೆ
ಂದು ಮಾತಿನಲ್ಲಿ ತ್ಯಾಗವನ್ನು ಬೋಧಿಸುತ್ತದೆ. ಎಲ್ಲವನ್ನೂ ತ್ಯಜಿಸಿ
ೕವರಲ್ಲಿ ಶರಣಾಗತರಾಗಿ.

## ೬. ಸಾಧನಕ್ಕೆ ಅಧಿಕಾರಿ

೧. ಒಂದು ಪೂರ್ತಿ ಮಾವಿನ ಹಣ್ಣನ್ನು ಅಥವಾ ಸೀಬೆ
ಣ್ಣನ್ನು ದೇವರಿಗೆ ಕೊಡಬಹುದು; ಅಥವಾ ಇನ್ನು ಯಾವುದಾದರೂ
ಲಸಕ್ಕೆ ಉಪಯೋಗಿಸಬಹುದು. ಆದರೆ ಅದನ್ನು ಒಂದು ಸಲ
ಾಗೆ ಕುಕ್ಕಿತು ಎಂದರೆ ನೈವೇದ್ಯ ಮಾಡುವುದಕ್ಕೆ ಆಗುವುದಿಲ್ಲ, ದಾನ
ಾಡುವುದಕ್ಕೆ ಆಗುವುದಿಲ್ಲ, ಅಥವಾ ತಾನೆ ತಿನ್ನುವುದಕ್ಕೂ ಆಗುವು
ಲ್ಲ. ಇದರಂತೆಯೇ ಹುಡುಗರಿಗೆ ಮತ್ತು ಯುವಕರಿಗೆ ದೇವರನ್ನು
ಡುಕುವಂತೆ ಪ್ರೋತ್ಸಾಹ ಕೊಡಬೇಕು. ಪ್ರಾಪಂಚಿಕ ಆಸೆಗಳಿಂದ
ನ್ನೂ ಮಾಸದ, ಎಂಜಲಾಗದ ಹಣ್ಣಿನಂತೆ ಅವರು. ಒಂದು ಸಲ
ಪ್ರಪಂಚದ ಆಸೆ ಮನಸ್ಸನ್ನು ಪ್ರವೇಶ ಮಾಡಿತು ಎಂದರೆ ಮೋಕ್ಷ
ಾರ್ಗವನ್ನು ಅವರು ಅನುಸರಿಸುವಂತೆ ಮಾಡುವುದು ತುಂಬಾ ಕಷ್ಟ.

೨. ನಾನು ಏಕೆ ಹುಡುಗರನ್ನು ಅಷ್ಟು ಪ್ರೀತಿಸುತ್ತೇನೆ?
ವರು ತಮ್ಮ ಮನಸ್ಸಿನ ಹದಿನಾರು ಆಣೆಗೆ ಒಡೆಯರು. ಅವರು
ಳೆದಂತೆಲ್ಲ ಅದು ಭಾಗವಾಗುತ್ತ ಬರುವುದು. ಮದುವೆಯಾದವನ
ರ್ಧಮನಸ್ಸು ಅವನ ಹೆಂಡತಿಯ ಕಡೆ ಹೋಗುವುದು. ಮಗು

ಹುಟ್ಟಿದ ಮೇಲೆ ಅದು ಕಾಲುಭಾಗ ತೆಗೆದುಕೊಳ್ಳುತ್ತದೆ. ಉ
ಕಾಲುಪಾಲು ಮನಸ್ಸು ತಂದೆತಾಯಿಗಳು, ಕೀರ್ತಿಗೌರವ, ಉಡು
ಮುಂತಾದುವುಗಳ ಕಡೆ ಚದರುತ್ತದೆ. ಆದಕಾರಣವೆ ಹುಡು
ಮನಸ್ಸು ದೇವರನ್ನು ಸುಲಭವಾಗಿ ತಿಳಿಯಬಲ್ಲುದು. ಹೀಗೆ ಮಾ
ವುದಕ್ಕೆ ವೃದ್ಧರಿಗೆ ಬಹಳ ಕಷ್ಟ.

೩. ಗಿಳಿ ಬೆಳೆದು ಅದರ ಗಂಟಲಿನ ಪರೆ ಗಟ್ಟಿಯಾದ ಮೇ
ಅದಕ್ಕೆ ಹಾಡಲು ಕಲಿಸಲಾಗುವುದಿಲ್ಲ. ಎಳೆಯದಾಗಿರುವಾಗ
ಅದಕ್ಕೆ ಕಲಿಸಬೇಕು. ಇದರಂತೆಯೇ ವೃದ್ಧಾಪ್ಯದಲ್ಲಿ ದೇವರ ಮೇ
ಮನಸ್ಸನ್ನು ಇಡಬೇಕಾದರೆ ಬಹಳ ಕಷ್ಟ. ಬಾಲ್ಯದಲ್ಲಿ ಇದನ
ಸುಲಭವಾಗಿ ಮಾಡಬಹುದು.

೪. ಒಂದು ಸೇರು ಹಾಲಿನಲ್ಲಿ ಸ್ವಲ್ಪ ನೀರು ಇದ್
ಅದನ್ನು ಅತ್ಯಲ್ಪ ಶ್ರಮದಿಂದ ಸ್ವಲ್ಪ ಸೌದೆ ಖರ್ಚು ಮಾಡಿ ಇಂಗಿ
ಬಹುದು. ಆದರೆ ಒಂದು ಸೇರು ಹಾಲಿನಲ್ಲಿ ಮುಕ್ಕಾಲು ಸೇ
ನೀರು ಇದ್ದರೆ ಅದು ಸುಲಭವಾಗಿ ಇಂಗುವುದಿಲ್ಲ. ಹುಡುಗ
ಮನಸ್ಸು ಪ್ರಾಪಂಚಿಕ ವಸ್ತುಗಳೊಂದಿಗೆ ಇನ್ನೂ ಮಿಶ್ರವಾಗ
ಇರುವುದರಿಂದ ದೇವರ ಕಡೆಗೆ ಸುಲಭವಾಗಿ ತಿರುಗಿಸಬಹುದು. ಆ
ಆಸೆಯೊಂದಿಗೆ ಹೆಚ್ಚು ಬೆರೆತುಹೋದ ಮುದುಕರ ಮನಸ್ಸನ್ನು ಹಿ
ಮಾಡಲಾಗುವುದಿಲ್ಲ.

೫. ಎಳೆಯ ಬಿದಿರನ್ನು ಸುಲಭವಾಗಿ ಬಗ್ಗಿಸಬಹುದ
ಆದರೆ ಬಲಿತ ಬಿದಿರನ್ನು ಬಗ್ಗಿಸಲು ಪ್ರಯತ್ನಿಸಿದರೆ ಅದು ಮುರಿ
ಹೋಗುವುದು. ದೇವರ ಕಡೆಗೆ ಎಳೆಯರ ಮನಸ್ಸನ್ನು ತಿರುಗಿ
ವುದು ಸುಲಭ. ಆದರೆ ವಯಸ್ಸಾದವರ ಮನಸ್ಸಾದರೋ ಹಾ
ಯತ್ನಿಸಿದಾಗ ಅದು ತಪ್ಪಿಸಿಕೊಳ್ಳುವುದು.

೬. ಮನುಷ್ಯನ ಮನಸ್ಸು ಸಾಸಿವೆಕಾಳಿನ ಪೊಟ್ಟಣದಂ
ಇರುವುದು. ಹರಿದ ಪೊಟ್ಟಣದಿಂದ ಚಲ್ಲಾಪಿಲ್ಲಿಯಾಗಿ ಬಿದ್ದುಹೋ
ಸಾಸಿವೆಕಾಳನ್ನು ಆರಿಸುವುದು ಎಷ್ಟು ಕಷ್ಟವೋ ಅದರಂತೆಯೆ
ಮನುಷ್ಯನ ಮನಸ್ಸು ಹರಿದುಹೋಗಿ ಅನೇಕ ಪ್ರಾಪಂಚಿಕ ವಸ್ತುಗಳ
ಲೀನವಾಗಿರುವಾಗ ಅದನ್ನು ಒಂದುಗೂಡಿಸಿ ದೇವರ ಕಡೆಗೆ ತಿರುಗಿ
ವುದು ಸುಲಭಸಾಧ್ಯವಲ್ಲ. ಸಿಕ್ಕಿದ ಕಡೆಗೆ ಇನ್ನೂ ಹೋಗ
ಹುಡುಗನ ಮನಸ್ಸನ್ನು ಯಾವುದಾದರೂ ಒಂದು ವಸ್ತುವಿನ ಮೇ

ಸುವುದು ಸುಲಭ. ಆದರೆ ವೃದ್ಧನ ಮನಸ್ಸಾದರೋ ಪ್ರಾಪಂಚಿಕ
ಯುಗಳಲ್ಲಿ ಪೂರ್ಣವಾಗಿ ಬೆರೆತುಹೋಗಿರುವುದರಿಂದ ಅವುಗಳಿಂದ
ದು ದೇವರ ಮೇಲೆ ನಿಲ್ಲಿಸುವುದು ಕಷ್ಟ.

೭. ಬೆಣ್ಣೆಯನ್ನು ತೆಗೆಯಬೇಕಾದರೆ ಸೂರ್ಯೋದಯಕ್ಕೆ
ಂಚೆಯೇ ಮೊಸರನ್ನು ಕಡೆಯಬೇಕು. ಬಿಸಿಲು ಏರಿದ ಮೇಲೆ
ದರೆ ಒಳ್ಳೆಯ ಬೆಣ್ಣೆ ಸಿಕ್ಕುವುದಿಲ್ಲ. ಇದರಂತೆಯೇ ತಮ್ಮ ಪ್ರಾಯ
ಯೇ ಯಾರು ಮನಸ್ಸನ್ನು ದೇವರ ಕಡೆಗೆ ತಿರುಗಿಸಿ ಸಾಧನೆಯನ್ನು
ಡುತ್ತಾರೆಯೋ ಅವರೇ ದೇವರನ್ನು ತಿಳಿದುಕೊಳ್ಳುವರು.

೮. ಒದ್ದೆಯಾದ ಬೆಂಕಿಯ ಕಡ್ಡಿಯನ್ನು ಎಷ್ಟು ಸಲ ಗೀಚಿ
ೂ ಹತ್ತುವುದಿಲ್ಲ. ಸುಮ್ಮನೆ ಮುರಿದುಹೋಗುವುದು. ಆದರೆ ಒಣ
ಬೆಂಕಿಯ ಕಡ್ಡಿಯನ್ನು ಒಂದುಸಲ ಗೀಚಿದರೆ ಸಾಕು, ಹತ್ತುವುದು.
ಗೆಯೇ ಕಪಟವಿಲ್ಲದ ಸತ್ಯವಂತರಾದ ಶುದ್ಧಾತ್ಮರು ಪ್ರಾಪಂಚಿಕ
ಸೆಗೆ ಒಳಗಾಗದ ಒಣಗಿದ ಬೆಂಕಿಯ ಕಡ್ಡಿಯಂತೆ. ಒಂದು ಸಲ
ವರ ಹೆಸರನ್ನು ಹೇಳಿದರೆ ಸಾಕು ಅವರ ಹೃದಯದಲ್ಲಿ ಪರಮಾತ್ಮನ
ೀಮ ಉದಯಿಸುವುದು. ಕಾಮಕಾಂಚನ ಪಾಶದಲ್ಲಿ ಸಿಕ್ಕಿರುವ
ಪಂಚಿಕನ ಮನಸ್ಸಾದರೋ ಒದ್ದೆಯಾದ ಬೆಂಕಿಕಡ್ಡಿಯಂತೆ.
ರುವೇಳೆ ಅವರಿಗೆ ದೇವರ ವಿಷಯವನ್ನು ಕುರಿತು ಬೋಧೆಮಾಡಿ
ೂ ಭಕ್ತಿಯನ್ನು ಹುಟ್ಟಿಸಲು ಆಗುವುದಿಲ್ಲ.

## ೧೦. ಹಲವು ಬಗೆಯ ಸಾಧಕರು

೧. ಎರಡು ವಿಧದ ಸಾಧಕರನ್ನು ನಾವು ನೋಡುತ್ತೇವೆ.
ಬ್ಬರು ಕೋತಿ ಮರಿಯಂತೆ, ಮತ್ತೊಬ್ಬರು ಬೆಕ್ಕಿನ ಮರಿಯಂತೆ.
ೋತಿಯ ಮರಿ ತಾನು ತಾಯಿಯನ್ನು ಅಪ್ಪಿ ಹಿಡಿದುಕೊಳ್ಳುತ್ತದೆ.
ನಂತರ ತಾಯಿ ಅದನ್ನು ಸ್ಥಳದಿಂದ ಸ್ಥಳಕ್ಕೆ ಕರೆದೊಯ್ಯುತ್ತದೆ.
ಕ್ಕಿನ ಮರಿ ತಾಯಿಯನ್ನು ಹಿಡಿದುಕೊಳ್ಳುವುದಿಲ್ಲ. ಆದರೆ ತಾಯಿ
ದನ್ನು ಎಲ್ಲಿ ಇಟ್ಟರೆ ಅಲ್ಲಿ ಸುಮ್ಮನೆ ಕಿರಿಚುತ್ತದೆ. ಆಗ ತಾಯಿ
ಂದು ಅದರ ಕತ್ತನ್ನು ಹಿಡಿದುಕೊಂಡು ತನಗೆ ತೋರಿದ ಕಡೆ
ದನ್ನು ಹೊತ್ತುಕೊಂಡು ಹೋಗುತ್ತದೆ. ಇದರಂತೆಯೇ ಜ್ಞಾನ
ೋಗ ಮತ್ತು ಅನಾಸಕ್ತಿಯೋಗವನ್ನು ಅಭ್ಯಾಸಮಾಡುವವನು

ಮೋಕ್ಷಕ್ಕೆ ತನ್ನ ಸ್ವಪ್ರಯತ್ನದ ಮೇಲೆ ನಿಲ್ಲುವನು. ಆದರೆ ಯ
ಪ್ರೇಮಮಾರ್ಗವನ್ನು ಅನುಸರಿಸುತ್ತಾರೆಯೋ ಅವರಿಗೆ ದೇವರೇ
ವನ್ನೂ ಮಾಡುತ್ತಾನೆಂಬುದು ಗೊತ್ತಿದೆ. ಆದಕಾರಣವೇ ಅ
ದೇವರನ್ನು ಸಂಪೂರ್ಣ ನೆಚ್ಚಿ ಅವನಲ್ಲಿ ಶರಣಾಗುವನು. ಮೊ
ನೆಯುವನು ಕೋತಿಯ ಮರಿಯಂತೆ, ಎರಡನೆಯುವನು ಬ
ಮರಿಯಂತೆ.

೨. ಮನೆಯ ಯಜಮಾನ ತನ್ನ ಸಂಸಾರಕ್ಕೆ ಸೇರಿದ ಹ
ಜನರಿಗೆ ಹಲವು ವಿಧದಲ್ಲಿ, ಅಂದರೆ, ಒಬ್ಬನಿಗೆ ತಂದೆ, ಒಬ್ಬನಿಗೆ ಭ
ಒಬ್ಬನಿಗೆ ಮಾವನಂತೆ ಕಾಣುತ್ತಾನೆ. ಅಂತೆಯೇ ಒಂದೇ ದೇವ
ಹಲವು ಬಗೆಯಲ್ಲಿ ನೋಡುತ್ತಾರೆ ಮತ್ತು ಹಲವು ಬಗೆಯಲ್ಲಿ ಪೂ
ತ್ತಾರೆ. ಕೆಲವರು ಆತನೊಂದಿಗೆ ಸ್ನೇಹಿತನಂತೆ ವರ್ತಿಸುತ
ಕೆಲವರು ಅವನನ್ನು ಯಜಮಾನನೆಂದು ನೋಡುತ್ತಾರೆ, ಕೆಲ
ಅವನನ್ನು ತಮ್ಮ ಮಗುವೆಂದು ತಿಳಿಯುತ್ತಾರೆ, ಮತ್ತೆ ಕೆಲ
ಅವನನ್ನು ತಮ್ಮ ಪತಿಯೆಂದು ತಿಳಿಯುತ್ತಾರೆ.

೩. ನೀವು ಹುಡುಕುವುದು ನಿಮಗೆ ದೊರಕುತ್ತದೆ. ಯಾ
ದೇವರನ್ನು ಹುಡುಕುತ್ತಾರೆಯೋ ಅವರಿಗೆ ದೇವರು ದೊರಕುತ್ತಾ
ಯಾರು ದ್ರವ್ಯ ಅಥವಾ ಕೀರ್ತಿಯನ್ನು ಹುಡುಕುತ್ತಾರೆಯೋ ಅ
ಅದನ್ನು ಪಡೆಯುತ್ತಾರೆ.

೪. ಭಿಕ್ಷುಕ, ರಾಜನ ಆಸ್ಥಾನಕ್ಕೆ ಹೋಗಿ ಒಂದು ಕುಂ
ಕಾಯನ್ನೋ ಸೋರೆಕಾಯನ್ನೋ ಕೇಳಿದರೆ ಮೂರ್ಖನಾಗುತ್ತಾ
ಇದರಂತೆಯೇ ಭಕ್ತ, ರಾಜರ ರಾಜನಾದ ದೇವರ ಹತ್ತಿರ ಹೋಗಿ
ವಾದ ಜ್ಞಾನ ಮತ್ತು ಭಕ್ತಿಯನ್ನು ಕೇಳುವ ಬದಲು ಅಣಿಮಾದಿ ಅ
ಸಿದ್ಧಿಗಳನ್ನು ಕೇಳಿದರೆ ಮೂರ್ಖನಾಗುತ್ತಾನೆ.

೫. ಸಾಧಕ ಭಕ್ತಿಮಾರ್ಗವನ್ನು ಅನುಸರಿಸುತ್ತಾನೆ
ಅಥವಾ ಜ್ಞಾನಮಾರ್ಗವನ್ನು ಅನುಸರಿಸುತ್ತಾನೆಯೋ ಎಂಬುದ
ತಿಳಿದುಕೊಳ್ಳುವುದು ಕಷ್ಟ. ಆನೆಗೆ ಎರಡು ಜೊತೆ ಹಲ್ಲುಗಳಿ
ಒಂದು ಹೊರಗಡೆ ಅಲಂಕಾರಕ್ಕೆ ಕಾಣುವ ಕೊಂಬು, ಮತ್ತೊಂ
ಆಹಾರವನ್ನು ಅಗಿಯುವುದಕ್ಕಾಗಿ ಬಾಯೊಳಗಿರುವ ಹಲ್ಲು. ಇ
ರಂತೆಯೇ ಭಕ್ತನು ಹಲವು ವೇಳೆ ತನ್ನ ನೈಜಸ್ವಭಾವವನ್ನು ಮರೆಮಾ
ಕೊಂಡು ಬೇರೊಂದು ಸ್ವಭಾವದವನಂತೆ ನಟಿಸುವನು.

೬. ಎರಡು ಬಗೆಯ ಯೋಗಿಗಳಿರುವರು; ಗುಪ್ತ ಮತ್ತು ದರ್ಶಕ. ಮೊದಲನೆಯವನು ರಹಸ್ಯವಾಗಿ ಸಾಧನೆಮಾಡಿ ಾರಿಗೂ ಅದು ಕಾಣದಂತೆ ನೋಡಿಕೊಳ್ಳುವನು. ಎರಡನೆ ುವನು ಯೋಗಿಯ ಬಾಹ್ಯಚಿಹ್ನೆಗಳಾದ ದಂಡ ಕಮಂಡಲು ಳನ್ನು ಹೊತ್ತುಕೊಂಡು ಸರಾಗವಾಗಿ ಆಧ್ಯಾತ್ಮಿಕ ವಿಚಾರಗಳನ್ನು ಾತನಾಡುವನು.

## ೧೧. ದೃಢಭಕ್ತ

೧. ಸಾವಿರಾರು ವರ್ಷಗಳು ಕಲ್ಲು ನೀರಿನಲ್ಲಿರಬಹುದು. ದರೂ ನೀರು ಕಲ್ಲಿನೊಳಗೆ ಇಳಿಯುವುದಿಲ್ಲ. ಆದರೆ ಜೇಡಿಮಣ್ಣಿಗೆ ೀರಿನ ಸಂಪರ್ಕವಾದೊಡನೆಯೇ ಅದು ನೀರಿನಲ್ಲಿ ಕರಗಿಹೋಗು ದು. ಹಾಗೆಯೇ ಶ್ರದ್ಧಾವಂತರು ಸಾವಿರಾರು ಕಷ್ಟನಷ್ಟಗಳಲ್ಲಿ ಕ್ಕಿದರೂ ಎದೆಗೆಡುವುದಿಲ್ಲ. ಆದರೆ ಶ್ರದ್ಧೆಯಿಲ್ಲದವರಿಗೆ ಸ್ವಲ್ಪ ಕಷ್ಟ ೋರಿದರೆ ಸಾಕು, ಆಗಲೇ ನಡುಗುತ್ತಾರೆ.

೨. ದೇವರು ಪ್ರಹ್ಲಾದನ ಪ್ರಾರ್ಥನೆಗೆ ಸಂತುಷ್ಟನಾಗಿ "ಏನು ರಬೇಕು, ಕೇಳು" ಎಂದನು. ಅದಕ್ಕೆ ಪ್ರಹ್ಲಾದ "ದೇವರೆ, ಯಾರು ನಗೆ ತೊಂದರೆ ಕೊಟ್ಟರೊ ಅವರನ್ನು ಕ್ಷಮಿಸು. ಅವರನ್ನು ಶಿಕ್ಷಿಸು ದರಿಂದ ನೀನೆ ಶಿಕ್ಷಿಸಿಕೊಳ್ಳುವೆ. ಏಕೆಂದರೆ ಚರಾಚರ ವಸ್ತು ಳಲ್ಲೆಲ್ಲಾ ನೀನು ಇರುವೆ" ಎಂದನು.

೩. ಶ್ರೀರಾಮಕೃಷ್ಣರಿಗೆ ಸಾಧು ಕೇಶವಚಂದ್ರನನ್ನುನೋಡಲು ಂಬಾ ಆಸೆಯಾಯಿತು. ಆಗ ಕೇಶವಚಂದ್ರನು ಕಲ್ಕತ್ತಾನಗರದಲ್ಲಿ ಲ್ಘರಿಯಾದಲ್ಲಿ ಗತಿಸಿದ ಜಯಗೋಪಾಲದಾಸನ ತೋಟದ ಮನೆ ುಲ್ಲಿ ವಾಸಿಸುತ್ತಿದ್ದನು. ಶ್ರೀರಾಮಕೃಷ್ಣರು ಹೃದಯನೊಂದಿಗೆ ವನ ಮನೆಗೆ ಹೊರಟರು. ಆಗ ಕೇಶವಬಾಬು ತನ್ನ ಅನುಯಾಯಿ ಳೊಂದಿಗೆ ತೋಟದಲ್ಲಿದ್ದ ಕೊಳದಲ್ಲಿ ಸ್ನಾನಮಾಡುವುದಕ್ಕೆ ಅಣಿ ಾಗುತ್ತಿದ್ದನು. ಶ್ರೀರಾಮಕೃಷ್ಣರು ಕೇಶವಬಾಬುವನ್ನು ತೋರಿ ುತ್ತಾ "ಇಲ್ಲಿರುವವರಲ್ಲೆಲ್ಲಾ ಇವನೊಬ್ಬನಿಗೆ ಮಾತ್ರವೆ ಬಾಲ ಬಿದ್ದು ೋಗಿದೆ" ಎಂದರು. ಇದನ್ನು ಕೇಳಿ ಕೇಶವಚಂದ್ರನ ಅನುಯಾಯಿ ಳು ಗೊಳ್ಳನೆ ನಕ್ಕರು. ಕೇಶವಬಾಬುವು ಅವರಿಗೆ ಬುದ್ಧಿಹೇಳುವ

ರೀತಿಯಲ್ಲಿ "ಹಾಗೆ ನಗಬೇಡಿ, ಅವರ ಮಾತಿನಲ್ಲಿ ಆಳವಾದ ಅ
ವಿದೆ" ಎಂದು ಹೇಳಿದನು. ಆಗ ಶ್ರೀರಾಮಕೃಷ್ಣರು ಹೀಗೆ ವಿ
ದರು: "ಕಪ್ಪೆಯು ಬಾಲ ಕಳಚಿಹೋಗುವವರೆಗೆ ಅದು ನೀರಿ
ಮಾತ್ರ ಇರಬಲ್ಲದು. ಬಾಲ ಬಿದ್ದುಹೋದ ಮೇಲೆ ಅದು ನೀರಿ
ಬೇಕಾದರೂ ಇರಬಹುದು, ನೆಲದಮೇಲೆ ಬೇಕಾದರೂ ಇರಬಹು
ಹೀಗೆಯೇ ದೇವರ ಧ್ಯಾನದಿಂದ ಯಾರ ಅಜ್ಞಾನದ ಬಾಲ ಬಿ
ಹೋಗಿದೆಯೋ ಅವರು ತಮ್ಮ ಇಚ್ಛೆಯಂತೆ ದೇವರಲ್ಲಿ ಮುಳ
ಬಲ್ಲರು ಅಥವಾ ಪ್ರಪಂಚದಲ್ಲಿ ಇರಬಲ್ಲರು."

## ೧೨. ಸಾಧನಕ್ಕೆ ಆತಂಕ

೧. ನೀರಿನ ತಪ್ಪಲೆಯಲ್ಲಿ ಒಂದು ಸಣ್ಣ ತೂತು ಏನಾದ
ಇದ್ದರೆ ನೀರು ಕ್ರಮೇಣ ಸೋರಿಹೋಗುವುದು. ಇದರಂತೆ ಸಾ
ನಲ್ಲಿ ಏನಾದರೂ ಸ್ವಲ್ಪ ಪ್ರಾಪಂಚಿಕತೆಯ ಸೋಂಕು ಇದ್ದರೂ ಅ
ಪ್ರಯತ್ನವೆಲ್ಲಾ ನಿಷ್ಫಲವಾಗುವುದು.

೨. ಹಸಿಯ ಜೇಡಿಮಣ್ಣಿಗೆ ಆಕಾರವನ್ನು ಕೊಡಬಹುದ
ಆದರೆ ಸುಟ್ಟ ಮಣ್ಣಿಗೆ ಆಗುವುದಿಲ್ಲ. ಹಾಗೆಯೆ ಯಾರ ಹೃದ
ಪ್ರಾಪಂಚಿಕ ಬಯಕೆಗಳಿಂದ ಸುಟ್ಟಿವೆಯೋ ಅವರಿಗೆ ಧಾರ್ಮಿ
ವಿಷಯ ರುಚಿಸುವುದಿಲ್ಲ.

೩. ಮರಳು ಮತ್ತು ಸಕ್ಕರೆ ಮಿಶ್ರವಾಗಿರಬಹುದು. ಆ
ಇರುವೆ ಮರಳನ್ನು ಬಿಟ್ಟು ಸಕ್ಕರೆಯನ್ನು ತಿನ್ನುವುದು. ಹಾಗೆಯೆ
ಯತಿಗಳು ಮತ್ತು ಪರಮಹಂಸರು ಅಸತ್ಯವಾದುದನ್ನು ಅಂದ
ಕಾಮಕಾಂಚನಗಳನ್ನು ಧಿಕ್ಕರಿಸಿ ಸತ್ಯವನ್ನು ಅಂದರೆ, ಸಚ್ಚಿದಾನ
ವನ್ನು ಸ್ವೀಕರಿಸುವರು.

೪. ಎಣ್ಣೆ ತಗಲಿದ ಕಾಗದದ ಮೇಲೆ ಬರೆಯಲಾಗುವುದಿ
ಇದರಂತೆಯೆ ಇಂದ್ರಿಯ ಭೋಗಾಭಿಲಾಷೆಗಳಿಂದ ಕೆಟ್ಟುಹೋ
ಮನಸ್ಸು ಭಗವಂತನ ವಿಷಯಕ್ಕೆ ಯೋಗ್ಯವಲ್ಲ. ಆದರೆ ಎಣ್ಣೆ
ಕಾಗದದ ಮೇಲೆ ಸುಣ್ಣವನ್ನು ಬಳಿದರೆ ಅದರ ಮೇಲೆ ಬರೆಯ
ಸಾಧ್ಯವಾಗುವಂತೆ, ಮನಸ್ಸಿನ ಮೇಲೆ ವೈರಾಗ್ಯವನ್ನು ಲೇಪಿಸಿದ
ಬರೆಯಲು ಸಾಧ್ಯವಾಗುವುದು.

೫. ಸಾಧನೆಯಲ್ಲಿ ನಿರತರಾಗಿರುವಾಗ ಧಾರ್ಮಿಕ ವಿಷಯಗಳ
ೀಜಿಗೆ ಹೋಗದವರೊಂದಿಗೆ ಸಂಪರ್ಕವನ್ನು ಇಟ್ಟುಕೊಳ್ಳಬೇಡ.
ತಹವರು ಯಾರು ದೇವರನ್ನು ಪೂಜಿಸುತ್ತಾರೋ ಮತ್ತು ಆತನ
ನ ಮಾಡುತ್ತಾರೊ ಅವರನ್ನು ಅಣಕಿಸುವರು. ಅವರು ದಯಾವಂತ
ನ್ನೂ ಧಾರ್ಮಿಕರನ್ನೂ ಹಂಗಿಸುವರು. ನೀನು ಅವರಿಂದ ದೂರವಿರು.

೬. ದನದ ಮಂದೆಗೆ ಒಂದು ಹೊಸ ಪ್ರಾಣಿ ಹೋದರೆ ಅದನ್ನು
ಂದೆ ಬೇಗ ಓಡಿಸುವುದು. ಆದರೆ ಅದು ಒಂದು ಹಸುವೇ ಆದರೆ
ರ ದನಗಳು ಅದರ ದೇಹವನ್ನು ನೆಕ್ಕಿ ಸ್ನೇಹಮಾಡಿಕೊಳ್ಳುವುವು.
ದರಂತೆಯೇ ಒಬ್ಬ ಭಕ್ತ ಇನ್ನೊಬ್ಬ ಭಕ್ತನನ್ನು ಸಂಧಿಸಿದರೆ ದೇವರ
ಚಾರ ಮಾತನಾಡುವರು. ಇಂತಹ ಸಂಗದಿಂದ ಇಬ್ಬರೂ ಅನ್ಯೋನ್ಯ
ಗಿ ಆನಂದಿಸುವರು. ಬೇರೆಯಾಗುವುದಕ್ಕೆ ಮನಸ್ಸು ಬರುವು
ಲ್ಲ. ಆದರೆ ಹಾಸ್ಯಗಾರನೊಂದಿಗೆ ಬೆರೆಯಲು ಭಕ್ತನಿಗೆ ಮನಸ್ಸು
ರುವುದಿಲ್ಲ.

೭. ಆಳವಿಲ್ಲದ ಬಾವಿಯಲ್ಲಿ ನೀರನ್ನು ಕುಡಿಯಬೇಕೆಂದು
ಚ್ಛಿಸಿದರೆ, ನೀರನ್ನು ಕಲಕದೆ ಜೋಪಾನವಾಗಿ ಮೇಲಿಂದ ತೆಗೆದು
ಳ್ಳಬೇಕು. ಕಲಕಿದರೆ ಬಗ್ಗಡ ನೀರಿನೊಂದಿಗೆ ಬೆರೆಯುವುದು.
ದರಂತೆಯೇ ದೇವರನ್ನು ತಿಳಿಯಬೇಕೆಂದು ನೀನು ಇಚ್ಛಿಸಿದರೆ ಗುರು
ನಲ್ಲಿ ನಂಬಿಕೆಯಿಟ್ಟು ಸಾಧನೆಯಲ್ಲಿ ಮುಂದುವರಿ. ಶಾಸ್ತ್ರೀಯವಾದ
ಚಾರವಾಗಿ ಸುಮ್ಮನೆ ನಿಮ್ಮ ಶಕ್ತಿಯನ್ನು ವ್ಯಯಮಾಡಿಕೊಳ್ಳಬೇಡಿ.
ಮ್ಮ ಮೆದುಳು ಬಹಳ ಸುಲಭವಾಗಿ ಕದಡುವುದು.

೮. ರೋಗಿಯ ಮೇಲೆ, ಮಂತ್ರಹಾಕಿದ ಸಾಸಿವೆಕಾಳನ್ನು
ರಚಿ ದೆವ್ವವನ್ನು ಬಿಡಿಸುವರು. ದೆವ್ವವೇ ಸಾಸಿವೆಕಾಳಿನ ಒಳಗೆ
ೂೀಗಿದ್ದರೆ ಅದು ಹೇಗೆ ಬಿಡಿಸುತ್ತದೆ? ದೇವರನ್ನು ಧ್ಯಾನಿಸುವ
ನಸ್ಸು ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತವಾಗಿದ್ದರೆ, ಸಾಧನೆಯಲ್ಲಿ
ನು ಹೇಗೆ ಉತ್ತೀರ್ಣನಾಗುವೆ?

೯. ನಿಮ್ಮ ಮಾತು ಮತ್ತು ಆಲೋಚನೆ ಒಂದೇ ಆಗಿರಲಿ.
ದೇ ನಿಜವಾದ ಸಾಧನೆ. ಅದಲ್ಲದೆ ಪ್ರಪಂಚವೇ ನನ್ನ ಸರ್ವಸ್ವ
ಬ ನಂಬಿಕೆ ಚೆನ್ನಾಗಿ ಮನಸ್ಸಿನಲ್ಲಿ ಬೇರೂರಿರುವಾಗ "ಹೇ ದೇವರೆ,
ನೇ ನನ್ನ ಸರ್ವಸ್ವ" ಎಂದು ಹೇಳಿದರೆ ನಿಮ್ಮ ಸಾಧನೆ ನಿಷ್ಫಲವಾಗು
ದರಲ್ಲಿ ಸಂದೇಹವಿಲ್ಲ.

